# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಸದಸ್ಯರ ಹೆಸರು | : | ಶ್ರೀ ಕಾಂತರಾಜ್ (ಬಿಎಂಎಲ್) (ಸ್ಥಳೀಯ ಸಂಸ್ಥೆಗಳಿಂದ ಚುನಾಯಿತರಾದವರು) |
| ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ | : | 782 |
| ಉತ್ತರ ದಿನಾಂಕ | : | 17.09.2021 |

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP) ಯಡಿ ನೇಮಕಗೊಂಡಿದ್ದ BRC / CRC ಸಂಯೋಜಕರುಗಳ ಸೇವೆಯನ್ನು ಮುಂದುವರೆಸುವುದರಿಂದ ಸರ್ಕಾರಕ್ಕೆ ಆಗುವ ತೊಂದರೆಗಳೇನು?<br>(ವಿವರವಾದ ಮಾಹಿತಿ ನೀಡುವುದು) | ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP)ಯಡಿ BRC ಮತ್ತು CRC ಸಂಯೋಜಕರುಗಳ ಸೇವೆಯನ್ನು ತಾತ್ಕಾಲಿಕವಾಗಿ ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲಾಗಿದ್ದು, ಸದರಿ ಯೋಜನೆಯು ಮುಕ್ತಾಯಗೊಂಡಿರುವುದರಿಂದ ಸೇವೆಯಲ್ಲಿ ಮುಂದುವರೆಸಲು ಆಗಿರುವುದಿಲ್ಲ.<br><br>ಸದರಿ BRC ಮತ್ತು CRC ಸಂಯೋಜಕರುಗಳು ತಮ್ಮನ್ನು ಹುದ್ದೆಯಲ್ಲಿ ಮುಂದುವರೆಸಲು ಮಾನ್ಯ ಉಚ್ಚ ನ್ಯಾಯಾಲಯಕ್ಕೆ ಸಲ್ಲಿಸಿದ ರಿಟ್ ಅರ್ಜಿಗಳನ್ನು ವಿಲೇಗೊಳಿಸಿರುತ್ತಾರೆ. ಏಕೆಂದರೆ ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆಯು (NRDWP) ಮುಕ್ತಾಯಗೊಂಡಿರುತ್ತದೆ.<br><br>ನಂತರದಲ್ಲಿ ದಿನಾಂಕ:15.08.2019ರಂದು **'ರಾಷ್ಟ್ರೀಯ ಜಲ ಜೀವನ್ ಮಿಷನ್'** ಕಾರ್ಯಕ್ರಮ ಜಾರಿಗೆ ಬಂದಿದ್ದು, ಈ ಯೋಜನೆಯಲ್ಲಿ BRC ಮತ್ತು CRC ಹುದ್ದೆಗಳ ಸೇವೆಯ ಬಗ್ಗೆ ಯಾವುದೇ ಪರಿಕಲ್ಪನೆ ಇರುವುದಿಲ್ಲ. |
| ಆ. | BRC/CRC ಸಂಯೋಜಕರುಗಳ ಸೇವೆಯನ್ನು ಮುಂದುವರೆಸಲು ಸರ್ಕಾರವು 2 ಬಾರಿ ನಿರ್ದೇಶನ ನೀಡಿದ್ದರೂ, ಕೂಡ ಅಧಿಕಾರಿಗಳು ಆದೇಶ ಮಾಡದಿರಲು ಕಾರಣವೇನು; | ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP) ಅಡಿಯಲ್ಲಿ BRC ಮತ್ತು CRC ಸಂಯೋಜಕರುಗಳ ಸೇವೆಯನ್ನು ಸೀಮಿತ ಅವಧಿಯವರೆಗೆ ತಾತ್ಕಾಲಿಕವಾಗಿ ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲಾಗಿತ್ತು. ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆಯು (NRDWP) ಮುಕ್ತಾಯಗೊಂಡಿರುವುದರಿಂದ ಸೇವೆಯನ್ನು ಮುಂದುವರೆಸಿರುವುದಿಲ್ಲ. |

| | | |
|---|---|---|
| ಇ) | ಈ ವಿಚಾರವು Policy Decisionಗೆ ಸಂಬಂಧಿಸಿದ್ದಲ್ಲಿ, ಸಚಿವ ಸಂಪುಟದ ಮುಂದೆ ಮಂಡಿಸಿ ಅನುಮೋದನೆ ಪಡೆಯದಿರಲು ಕಾರಣಗಳೇನು; ಯಾವ ಕಾಲಮಿತಿಯಲ್ಲಿ ಇದಕ್ಕೆ ಸಚಿವ ಸಂಪುಟದಿಂದ ಅನುಮತಿ ಪಡೆಯಲಾಗುವುದು; | ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP)ಯಲ್ಲಿ BRC ಮತ್ತು CRC ಸಂಯೋಜಕರುಗಳ ಸೇವೆಯನ್ನು ತಾತ್ಕಾಲಿಕವಾಗಿ ಪಡೆಯಲಾಗಿದ್ದು, ಸದರಿ ಯೋಜನೆಯು ಮುಕ್ತಾಯಗೊಂಡಿದ್ದು, ಸೇವೆಯಿಂದ ಬಿಡುಗಡೆಗೊಳಿಸಲಾಗಿದೆ.<br><br>ನಂತರ **'ರಾಷ್ಟ್ರೀಯ ಜಲ ಜೀವನ್ ಮಿಷನ್'** ಕಾರ್ಯಕ್ರಮ ಜಾರಿಗೆ ಬಂದಿದ್ದು, ಸದರಿ ಯೋಜನೆಯಲ್ಲಿ BRC ಮತ್ತು CRC ಸೇವೆಯ ಬಗ್ಗೆ ಮಾರ್ಗಸೂಚಿಗಳಲ್ಲಿ ಅವಕಾಶ ಇರುವುದಿಲ್ಲ. |
| ಈ) | ಸಾವಿರಾರು ಪದವೀಧರ ಕುಟುಂಬಗಳಿಗೆ ಜೀವನ ಭದ್ರತೆ ನೀಡುವಂತಹ ಈ ಆದೇಶವನ್ನು ಸರ್ಕಾರ ಯಾವ ಕಾಲಮಿತಿಯಲ್ಲಿ ಜಾರಿ ಮಾಡಲಿದೆ; | ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP)ಯಡಿ ಸಂಯೋಜಕರುಗಳ ಸೇವೆಯನ್ನು ತಾತ್ಕಾಲಿಕವಾಗಿ ಸೀಮಿತ ಅವಧಿಯವರೆಗೆ ಮಾತ್ರ ಹೊರಗುತ್ತಿಗೆ ಆಧಾರದ ಮೇಲೆ ಪಡೆಯಲಾಗಿತ್ತು. ಯೋಜನೆಯು ಮುಕ್ತಾಯಗೊಂಡಿರುವುದರಿಂದ ಸೇವೆಯಿಂದ ಬಿಡುಗಡೆ ಮಾಡಲಾಗಿದೆ. |
| ಉ) | ಕಡತ:ಸಂಖ್ಯೆ:ಗ್ರಾಅಪ/69/ಗ್ರಾನೀಸ(2)2015, ಕಡತದ ಟಿಪ್ಪಣಿ ಹಾಳೆಗಳೊಂದಿಗೆ ಯಥಾವತ್ತು ಪ್ರತಿಯನ್ನು ನೀಡುವುದು. | ಕಡತದ ಟಿಪ್ಪಣಿ ಹಾಳೆಗಳೊಂದಿಗೆ ಯಥಾವತ್ತು ಪ್ರತಿಯನ್ನು **ಅನುಬಂಧದಲ್ಲಿ** ಲಗತ್ತಿಸಲಾಗಿದೆ. |

ಸಂ:ಗ್ರಾಕುನೀ&ನೈಇ 223 ಗ್ರಾನೀಸ(4)2021

(ಕೆ.ಎಸ್. ಈಶ್ವರಪ್ಪ)
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

(1) ... ಗ್ರಾಕುನೀ(2) 2013-18

**ಸಲ್ಲಿಸಿದೆ:**

ವಿಷಯ: ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP) ಅಡಿ BRC/CRC ಗಳ ನೇಮಕಾತಿ ಹಾಗೂ ಅವರನ್ನು ಸೇವೆಯಿಂದ ಮುಕ್ತಗೊಳಿಸಿರುವ ಕುರಿತು.

ಉಲ್ಲೇಖ:
1. ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯ ನಿರ್ಣಯ ದಿನಾಂಕ:18.01.2019.
2. ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ CRC ಗಳ ಸೇವೆಯನ್ನು NGO ಗಳ ಮುಂದುವರೆಸದೇ NRDWP ಅಡಿ ಸದರಿ ಯೋಜನೆ ಇರುವವರೆಗೂ ಮುಂದುವರೆಸುವಂತೆ ನೀಡಲಾದ ತೀರ್ಪಿನ ವಿರುದ್ಧ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ/ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯು ಸಲ್ಲಿಸಿದ ರಿಟ್ ಅಪೀಲ್ ಸಂಖ್ಯೆ: 366/2019.
3. ಭಾರತ ಸರ್ಕಾರದ ಕುಡಿಯುವ ನೀರು ಮತ್ತು ನೈರ್ಮಲ್ಯ ಮಂತ್ರಾಲಯದ ಪತ್ರ ಸಂಖ್ಯೆ: W-11042/72/2009-Water Dated 24th August, 2010 ಹಾಗೂ ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP) ಯ ಮಾರ್ಗಸೂಚಿಗಳು, 2013.

*****

**ಪೀಠಿಕೆ:-**

ವಿಷಯಕ್ಕೆ ಸಂಬಂಧಿಸಿದಂತೆ, ಉಲ್ಲೇಖ(1)ರನ್ವಯ ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯು ದಿನಾಂಕ:18.01.2019ರ ಸಭೆಯಲ್ಲಿ ಸರ್ವಾನುಮತದಿಂದ ಕೈಗೊಂಡು ನಿರ್ಣಯದ (ಕಂಡಿಕೆ-12 infra) ಕುರಿತಂತೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯು ಅಗತ್ಯ ಕ್ರಮ ಕೈಗೊಳ್ಳಲು ಸಮಿತಿಯ ಅಧ್ಯಕ್ಷರು ನಿರ್ದೇಶಿಸಿರುವ ಹಿನ್ನಲೆಯಲ್ಲಿ ಈ ಕೆಳಕಂಡ ಅಂಶಗಳನ್ನು ಇಲಾಖೆಯ ಮೇಲಾಧಿಕಾರಿಗಳಿಗೆ ಹಾಗೂ ಮಾನ್ಯ ಸಚಿವರ ಅವಗಾಹನೆಗೆ ತರಲಾಗಿದೆ.

1. ಭಾರತ ಸರ್ಕಾರದ ಕುಡಿಯುವ ನೀರು ಮತ್ತು ನೈರ್ಮಲ್ಯ ಮಂತ್ರಾಲಯದ ಪತ್ರ ಸಂಖ್ಯೆ: W-11042/72/2009-Water Dated 24th August, 2010 ಅಡಿಯಲ್ಲಿ ಹಾಗೂ ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ (NRDWP) ಯ ಮಾರ್ಗಸೂಚಿಗಳು, 2013ರ ಅನುಬಂಧ-7 ರಾಜ್ಯ, ಜಿಲ್ಲೆ, ಬ್ಲಾಕ್ (ತಾಲ್ಲೂಕು) ಹಾಗೂ ಗ್ರಾಮಮಟ್ಟದಲ್ಲಿ ಸಾಂಸ್ಥಿಕ ವ್ಯವಸ್ಥೆ ಬಗ್ಗೆ ವಿವರಗಳನ್ನು ಹೊಂದಿದ್ದು, ಈ ಅನುಬಂಧದ ಕಂಡಿಕೆ-6ರ ಉಪಕಂಡಿಕೆ-1 ರಿಂದ 13ರ ವರೆಗೆ ಸವಿಸ್ತಾರವಾಗಿ BRC/CRC ಗಳ ಸಂಖ್ಯೆ, ಕರ್ತವ್ಯ/ ಜವಾಬ್ದಾರಿಗಳು, ಅವರ ಕಾರ್ಯಕ್ಷೇತ್ರ, ಸಿಬ್ಬಂದಿ ವ್ಯವಸ್ಥೆ, ಆಯ್ಕೆ ಪ್ರಕ್ರಿಯೆ, ಹಣಕಾಸು ವ್ಯವಸ್ಥೆ, BRC/CRC ಗಳ ಸಂಬಂಧ ತಾಲ್ಲೂಕು ಪಂಚಾಯಿತಿ/ಗ್ರಾಮ ಪಂಚಾಯಿತಿ/ಗ್ರಾಮ ಸಭಾ ಹಾಗೂ ರಾಜ್ಯ/ ಜಿಲ್ಲಾ ನೀರು ಮತ್ತು ನೈರ್ಮಲ್ಯ ಮಿಷನ್/ ಗ್ರಾಮ ಮಟ್ಟದ ನೀರು ಮತ್ತು ನೈರ್ಮಲ್ಯ ಸಮಿತಿಗಳ ಪಾತ್ರ ಇವುಗಳ ಬಗ್ಗೆ ನಿಶದಪಡಿಸಲಾಗಿದೆ.

ಪು.ತಿ.ನೋ.

2. ಕರ್ನಾಟಕ ರಾಜ್ಯ ನೀರು ಮತ್ತು ನೈರ್ಮಲ್ಯ ಮಿಷನ್, ಬೆಂಗಳೂರು ಇದರ ಮಿಷನ್ ನಿರ್ದೇಶಕರು ದಿನಾಂಕ:04.04.2011 ರಂದು ರಾಜ್ಯದ ಎಲ್ಲೆಡೆ ತಾಲ್ಲೂಕು ಮಟ್ಟದ ಸಂಯೋಜಕರು (BRC) ಹಾಗೂ ಹೋಬಳಿ ಮಟ್ಟದ ಸಂಯೋಜಕರ (CRC) ತಾತ್ಕಾಲಿಕ ಹುದ್ದೆಗಳನ್ನು ವೈಯುಕ್ತಿಕ ಸಮಾಲೋಚನಾ ಆಧಾರದ ಮೇಲೆ ಒಂದು ವರ್ಷದ ಅವಧಿಗೆ ಮಾತ್ರ ತುಂಬಲು ಮತ್ತು ಅಗತ್ಯ ಕಂಡುಬಂದಲ್ಲಿ, ಸದರಿ ಹುದ್ದೆಗಳ ಸೇವೆಯ ಅವಧಿಯನ್ನು ವಿಸ್ತರಿಸುವ ಕುರಿತು ಪ್ರಕಟಣೆಯನ್ನು ಹೊರಡಿಸಿರುತ್ತಾರೆ.

3. ಸದರಿ ಪ್ರಕಟಣೆಯ ಅನುಸಾರ, ರಾಜ್ಯದ 30 ಜಿಲ್ಲೆಗಳ 176 ತಾಲ್ಲೂಕುಗಳ ಪೈಕಿ, 151 ತಾಲ್ಲೂಕುಗಳಲ್ಲಿ 149 BRC ಗಳು ಹಾಗೂ 151 ತಾಲ್ಲೂಕುಗಳಲ್ಲಿ 563 CRC ಗಳನ್ನು ರಾಜ್ಯ ನೀರು ಮತ್ತು ನೈರ್ಮಲ್ಯ ಮಿಷನ್‌ವತಿಯಿಂದ ಆಯ್ಕೆ ಮಾಡಲಾಗಿದ್ದು, ಸಂಬಂಧಿಸಿದ ಜಿಲ್ಲೆಗಳಿಗೆ ಆಯ್ಕೆಯ ಪಟ್ಟಿಯನ್ನು ದಿನಾಂಕ:23.04.2011ರಂದು ಪ್ರಕಟಿಸಲು ಸೂಚಿಸಲಾಗಿತ್ತು. ತದನಂತರ, ದಿನಾಂಕ:27.04.2011 ಮತ್ತು ದಿ:28.04.2011 ರಂದು ಎರಡು ದಿನಗಳ ತರಬೇತಿಗೆ ಆಯ್ಕೆಗೊಂಡ BRC/ CRC ಗಳು ಹಾಜರಾಗಲು ಹಾಗೂ ಯಶಸ್ವಿಯಾಗಿ ತರಬೇತಿ ಮುಗಿಸಿದ BRC/ CRC ಗಳಿಗೆ ದಿನಾಂಕ:02.05.2011 ರಿಂದ ಜಾರಿಗೆ ಬರುವಂತೆ ನೇಮಕಾತಿ ಆದೇಶವನ್ನು ನೀಡಿ, ಸದರಿ ಅಭ್ಯರ್ಥಿಗಳಿಂದ ಕರಾರು ಪತ್ರವನ್ನು ಪಡೆಯಲು ರಾಜ್ಯ ನೀರು ಮತ್ತು ನೈರ್ಮಲ್ಯ ಮಿಷನ್‌ನ ನಿರ್ದೇಶಕರು ತಮ್ಮ ಪತ್ರ ದಿನಾಂಕ:22.04.2011ರ ಮೂಲಕ ಎಲ್ಲಾ ಜಿಲ್ಲಾ ಪಂಚಾಯಿತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸೂಚಿಸಿರುತ್ತಾರೆ.

4. ನಿರ್ದೇಶಕರ ಮೇಲಿನ ಸೂಚನೆಯ ಹಿನ್ನೆಲೆಯಲ್ಲಿ, 149 BRC ಗಳು ಹಾಗೂ 563 CRC ಗಳಿಗೆ ದಿನಾಂಕ:02.05.2011 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ನೇಮಕಾತಿ ಆದೇಶ ನೀಡಿ, ಕರಾರು ಪತ್ರಗಳನ್ನು ಆಯಾ ಜಿಲ್ಲಾ ಪಂಚಾಯಿತಿಗಳಲ್ಲಿ ಪಡೆಯಲಾಗಿದೆ.

5. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 97 ಗ್ರಾನೀಸ(5) 2011, ದಿನಾಂಕ:23.04.2012ರನ್ವಯ, ನೇಮಕಗೊಂಡಿರುವ BRC/CRC ಗಳ ಸೇವೆಯನ್ನು ದಿನಾಂಕ:30.04.2012ಕ್ಕೆ ಮುಕ್ತಾಯಗೊಳಿಸಲು, ಉಲ್ಲೇಖ(3)ರ NRDWP ಯ ಮಾರ್ಗಸೂಚಿಗಳನ್ವಯ ದಿ:30.04.2012ರಂದು ವಜಾಗೊಳ್ಳಲಿರುವ BRC/CRC ಗಳ ಸೇವೆ ಅಗತ್ಯವಿದ್ದಲ್ಲಿ ಚಾಲ್ತಿ ಪಾರದರ್ಶಕ ನೀತಿಯನ್ವಯ ಅರ್ಹ ಸಂಸ್ಥೆಗಳನ್ನು ಆಯ್ಕೆ ಮಾಡಿ, ಸದರಿ ಸಂಸ್ಥೆಗಳ ಮುಖೇನ ಹೊರಗುತ್ತಿಗೆ ಆಧಾರದ ಮೇಲೆ ಹಾಲಿ BRC/CRC ಗಳ ಸೇವೆಯನ್ನು ಪಡೆದುಕೊಳ್ಳುವ ನಿರ್ಧಾರವನ್ನು ಆಯಾ ಜಿಲ್ಲಾ ಪಂಚಾಯಿತಿಗಳು ಕೈಗೊಳ್ಳಲು ಹಾಗೂ BRC/CRC ಗಳ ಸೇವೆಯನ್ನು ನೇರವಾಗಿ ಮುಂದುವರೆಸಿ, ಅವರ ಸೇವೆ ಕ್ರಮಬದ್ಧಗೊಳಿಸುವ ಗೊಂದಲಗಳಿಗೆ, ಮುಂದಿನ ಸೇವಾ ಭದ್ರತೆ, ವೇತನ ಇತ್ಯಾದಿ ಕುರಿತಂತೆ ಅವರ ಮನವಿಗಳಿಗೆ ಆಸ್ಪದ ಕಲ್ಪಿಸದಂತೆ ಸ್ಪಷ್ಟಪಡಿಸಲಾಗಿತ್ತು.

6. ಸೇವೆಯಿಂದ ತೆಗೆದುಹಾಕಲ್ಪಟ್ಟ ಹಲವು BRC/CRC ಗಳು ತಮ್ಮ ಸೇವೆಯನ್ನು NRDWP ಯೋಜನೆಯ ಅನುಷ್ಠಾನಾವಧಿಯವರೆಗೂ ಮುಂದುವರೆಸಲು ಕೋರಿ ರಿಟ್ ಅರ್ಜಿಗಳನ್ನು (ಸಂ. 238492, 23851/2012, 16301-16302/2012, 17303-17304/2012 ಮತ್ತು 24079-24080/2012) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ದಾಖಲಿಸಿದ್ದು, ದಿನಾಂಕ:20.07.2012ರಂದು ಈ ರಿಟ್ ಅರ್ಜಿಗಳ ಸಂಬಂಧ ನೀಡಲಾದ ತೀರ್ಪಿನಲ್ಲಿ, ಈ ಕೆಳಕಂಡಂತೆ ಆದೇಶಿಸಿ, ಸದರಿ ರಿಟ್ ಅರ್ಜಿಗಳನ್ನು ವಿಲೇಗೊಳಿಸಲಾಗಿದೆ:

...3

ಅ. ಅರ್ಜಿದಾರರಿಗೆ ತಮ್ಮ ಸೇವೆಯನ್ನು ಸಕ್ರಮಗೊಳಿಸುವಂತೆ ಕೋರಲು ಹಕ್ಕು ಇಲ್ಲದಿದ್ದಾಗ್ಯೂ, 2ನೇ ಪ್ರತಿವಾದಿಯಾದ ಜಿಲ್ಲಾ ಪಂಚಾಯಿತಿಗೆ ಅರ್ಜಿದಾರರ ಸೇವೆಯು ಅವಶ್ಯವಿದೆ ಎಂದು ತೋರಿದಲ್ಲಿ, ಪ್ರತಿವಾದಿಗಳು NRDWP ಯೋಜನೆಯು ಮುಕ್ತಾಯಗೊಳ್ಳುವವರೆಗೂ ಅರ್ಜಿದಾರರ ಸೇವೆಯನ್ನು ಮುಂದುವರೆಸತಕ್ಕದ್ದು.

ಆ. ಒಂದು ವೇಳೆ ಅರ್ಜಿದಾರರು ಈಗಾಗಲೇ ಕಾರ್ಯನಿರ್ವಹಿಸುತ್ತಿದ್ದು, ಅವರ ಸೇವೆ ಅವಶ್ಯಕತೆ ಇದ್ದಲ್ಲಿ, ಅವರನ್ನು NRDWP ಯೋಜನೆಯು ಮುಕ್ತಾಯಗೊಳ್ಳುವವರೆಗೂ ಸೇವೆಯಿಂದ ತೆಗೆದುಹಾಕತಕ್ಕದ್ದಲ್ಲ.

7. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 95 ಗ್ರಾನೀಸ(5) 2011, ದಿನಾಂಕ:04.07.2012ರನ್ವಯ, ಹೊಸದಾಗಿ ಅಥವಾ ಈಗಾಗಲೇ ಸೇವೆಯಿಂದ ತೆಗೆದುಹಾಕಲ್ಪಟ್ಟಿರುವ BRC/CRC ಗಳ ಸೇವೆಯನ್ನು ಅರ್ಹ ಸ್ವಯಂ ಸೇವಾ ಸಂಸ್ಥೆಗಳ ಅಥವಾ ಹೊರಗುತ್ತಿಗೆ ಆಧಾರದ ಮೇಲೆ KTPP ಕಾಯ್ದೆಯನ್ವಯ ಆಯಾ ಜಿಲ್ಲಾ ಪಂಚಾಯಿತಿಗಳೇ ಪಡೆದುಕೊಳ್ಳಲು ಅನುಮತಿಸಲಾಗಿತ್ತು.

8. ಕಂಡಿಕೆ-6ರಲ್ಲಿ ಉಲ್ಲೇಖಿಸಲಾದ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ದಿನಾಂಕ:20.07.2012ರ ತೀರ್ಪಿನ ವೇಳೆಗಾಗಲೇ ರಿಟ್ ಅರ್ಜಿದಾರರ ಪೈಕಿ ಬೆಂಗಳೂರು (ನಗರ) ಜಿಲ್ಲಾ ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ BRC ಶ್ರೀ ಅಂಜನಪ್ಪ, CRC ಗಳಾದ ಶ್ರೀಮತಿ ಪಿ.ಎಸ್. ಶೋಭಾ, ಶ್ರೀಮತಿ ಎಸ್. ಶಾರದಮ್ಮ ಮತ್ತು ಶ್ರೀ ರಾಮಾಂಜನಪ್ಪ, ತುಮಕೂರು ಜಿಲ್ಲಾ ಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ BRC ಗಳಾದ ಶ್ರೀ ಎಸ್. ಚಿಕ್ಕಣ್ಣ ಮತ್ತು ಶ್ರೀ ಡಿ. ರಂಗನಾಥ CRC ಶ್ರೀ ಪಿ.ಎನ್. ದಿನೇಶ್‌ಕುಮಾರ್ ಇವರುಗಳನ್ನು ಕಂಡಿಕೆ-5ರಲ್ಲಿಯ ದಿನಾಂಕ:23.04.2012ರ ಸರ್ಕಾರಿ ಆದೇಶದನ್ವಯ ದಿನಾಂಕ:30.04.2012ರಂದೇ ಸೇವೆಯಿಂದ ಬಿಡುಗಡೆಗೊಳಿಸಲಾಗಿದೆ. ಆದ್ದರಿಂದ, ದಿನಾಂಕ:20.07.2012ರ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪು ಇವರ ಸಂಬಂಧವಾಗಿ ಫಲದಾಯಕವಾಗಿರುವುದಿಲ್ಲ (The said judgement has become infructuous). ರಿಟ್ ಅರ್ಜಿದಾರರಾದ ಶ್ರೀ ಲಿಂಗರಾಜು (BRC) ಹಾಗೂ ಶ್ರೀ ಎಸ್. ಮಹೇಶ್ (CRC) ಚಾಮರಾಜನಗರ ಜಿಲ್ಲಾ ಪಂಚಾಯಿತಿಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿದ್ದಾರೆ. ಈ ಇಬ್ಬರೂ ತಮ್ಮ ಹುದ್ದೆಗಳಲ್ಲಿ ಮುಂದುವರೆದಿರುವುದರಿಂದ, ದಿನಾಂಕ:20.07.2012ರ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದ ತೀರ್ಪು ಫಲದಾಯಕವಾಗಿರುತ್ತದೆ.

9. ತುಮಕೂರು ಜಿಲ್ಲಾ ಪಂಚಾಯಿತಿಯಲ್ಲಿ CRC ಎಂದು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ನೇಮಕಗೊಂಡು, ದಿನಾಂಕ:30.04.2012ರಂದು ಕಂಡಿಕೆ-5 ರಲ್ಲಿಯ ದಿನಾಂಕ:23.04.2012ರ ಸರ್ಕಾರದ ಆದೇಶದಂತೆ ಸೇವೆಯಿಂದ ಬಿಡುಗಡೆಗೊಂಡ ಶ್ರೀ ಕೆ.ಸಿ. ಮಧು ಹಾಗೂ ಶ್ರೀ ಹೆಚ್.ಎಸ್. ಸಂತೋಷ್‌ಕುಮಾರ್ ಇವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ರಿಟ್ ಅರ್ಜಿಗಳನ್ನು (ಸಂ:58147 ಮತ್ತು 58148/2013) ದಿನಾಂಕ:18.12.2013ರಂದು ದಾಖಲಿಸಿ, ತಮ್ಮ ಸೇವೆಯನ್ನು NRDWP ಯೋಜನೆಯ ಅನುಷ್ಠಾನಾವಧಿಯವರೆಗೂ ಮುಂದುವರೆಸಲು ಹಾಗೂ ತಮ್ಮನ್ನು ಯಾವುದೇ NGO ಅಥವಾ ಹೊರಗುತ್ತಿಗೆ ಸಂಸ್ಥೆಯ ಅಧೀನದಲ್ಲಿ ಕಾರ್ಯನಿರ್ವಹಿಸಲು ವಹಿಸದೇ, ಯೋಜನೆಯಡಿ ಕಾರ್ಯನಿರ್ವಹಿಸುವಂತೆ ಎದುರು ಅರ್ಜಿದಾರರಾದ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು/ ಆಯುಕ್ತರು/ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳು, ಜಿಲ್ಲಾ ಪಂಚಾಯಿತಿ, ತುಮಕೂರು ಇವರಿಗೆ ನಿರ್ದೇಶಿಸಲು ಕೋರಿರುತ್ತಾರೆ.

...4

10. ಮೇಲಿನ ರಿಟ್ ಅರ್ಜಿಯ ಸಂಬಂಧ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ದಿನಾಂಕ:01.10.2018ರಂದು ನೀಡಿದ ತೀರ್ಪಿನಲ್ಲಿ, ಈ ಕೆಳಕಂಡಂತೆ ಆದೇಶಿಸಿ, ಸದರಿ ರಿಟ್ ಅರ್ಜಿಗಳನ್ನು ವಿಲೇಗೊಳಿಸಲಾಗಿದೆ:

ಅ. ಅರ್ಜಿದಾರರು NRDWP ಯೋಜನೆಯಡಿ ನೇಮಕಗೊಂಡಿದ್ದು, ಒಪ್ಪಂದದಡಿ, ಅರ್ಜಿದಾರರು ಇನ್ನೂ ಸೇವೆಯಲ್ಲಿರುವುದರಿಂದ ಹಾಗೂ ಸದರಿ ಯೋಜನೆಯು ಮುಂದುವರೆದಿರುವುದರಿಂದ, ಯೋಜನೆಯಡಿ NGO ಗಳನ್ನು ಸೃಜಿಸಿ, ಅರ್ಜಿದಾರರಿಗೆ ಆ NGO ಗಳಡಿ ಕಾರ್ಯನಿರ್ವಹಿಸುವಂತೆ ವಿನಾಕಾರಣ ಆದೇಶಿಸಿರುವುದು ತರ್ಕರಹಿತವಾಗಿದೆ.

ಆ. ಕೇಂದ್ರ ಸರ್ಕಾರವು ಜಾರಿಗೊಳಿಸಿದ NRDWP ಯೋಜನೆಯಡಿ ಅರ್ಜಿದಾರರು ನೇಮಕಗೊಂಡಿರುವ ಹಿನ್ನೆಲೆಯಲ್ಲಿ, ಯೋಜನೆಯು ಮುಂದುವರೆಯುವವರೆಗೂ, ಅರ್ಜಿದಾರರ ಸೇವೆಯನ್ನು ಸದರಿ ಯೋಜನೆಯಡಿ ಪಡೆಯುವುದಲ್ಲದೇ, ಅವರ ವೇತನ ಪಾವತಿ, ಇತರೆ ನಿಯಮ/ ಷರತ್ತುಗಳು ಯೋಜನೆಯ ಮಾರ್ಗಸೂಚಿಗಳಿಗೆ ಒಳಪಟ್ಟಿರುತ್ತವೆ.

11. ಮೇಲಿನ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ಇದರ ದಿನಾಂಕ:01.10.2018ರ ತೀರ್ಪು ಈ ಕೆಳಕಂಡ ಕಾರಣಗಳಿಂದ ದೋಷಪೂರಿತವಾಗಿದೆ:

ಅ. ಅರ್ಜಿದಾರರು ತುಮಕೂರು ಜಿಲ್ಲಾ ಪಂಚಾಯಿತಿಯಲ್ಲಿ CRC ಗಳಾಗಿ ಕಾರ್ಯನಿರ್ವಹಿಸುತ್ತಿದ್ದು, ಕಂಡಿಕೆ-5ರಲ್ಲಿಯ ದಿನಾಂಕ:23.04.2012ರ ಸರ್ಕಾರಿ ಆದೇಶದನ್ವಯ ದಿನಾಂಕ:30.04.2012ರಂದು ಸೇವೆಯಿಂದ ಬಿಡುಗಡೆಗೊಳಿಸಲಾಗಿದ್ದು, ಪ್ರಸ್ತುತ ತಮ್ಮ ರಿಟ್ ಅರ್ಜಿಯ ವಿಚಾರಣೆಯಲ್ಲಿ ತಾವು ಇನ್ನೂ ಸೇವೆಯಲ್ಲಿ ಮುಂದುವರೆದಿರುವ ಬಗ್ಗೆ ಯಾವುದೇ ದಾಖಲಾತಿಗಳನ್ನು ಸಲ್ಲಿಸದಿದ್ದರೂ, ಮಾನ್ಯ ನ್ಯಾಯಾಲಯವು ರಿಟ್ ಅರ್ಜಿದಾರರು ಒಪ್ಪಂದದಡಿ ಸೇವೆಯಲ್ಲಿ ಮುಂದುವರೆದಿರುವುದಾಗಿ ಉಲ್ಲೇಖಿಸಿರುವುದು ಸಂಗತಿಯಲ್ಲ.

ಆ. ಉಲ್ಲೇಖ(3)ರಡಿಯಲ್ಲಿಯ NRDWP ಯೋಜನೆಯ ಮಾರ್ಗಸೂಚಿಗಳ ಕಂಡಿಕೆ-6ರಲ್ಲಿ ಈ ಕೆಳಗಿನಂತೆ ಜಿಲ್ಲಾ ನೀರು ಮತ್ತು ನೈರ್ಮಲ್ಯ ಮಿಷನ್ NGO ಅಥವಾ ಓರ್ವ ಹೊರಗುತ್ತಿಗೆ ಸಂಸ್ಥೆಯ ಮೂಲಕ ಒಪ್ಪಂದದ ಮೇರೆಗೆ, ಪ್ರತಿ ವರ್ಷ ನವೀಕರಿಸುವ ಷರತ್ತಿಗೊಳಪಟ್ಟು BRC ಗಳ ಸೇವೆಯನ್ನು ಪಡೆಯುವಂತೆ ಸ್ಪಷ್ಟಪಡಿಸಲಾಗಿದೆ:

**Guidelines for setting up of Block Resource Centres (BRCs) for National Rural Drinking Water Programme (NRDWP)**

**6. Staffing of BRCs: All functionaries of BRC will be hired by the DWSM through an NGO or an outsourcing agency to provide specific services on contract basis, renewable on a yearly basis,** following the process laid down by the SWSM and will be paid a consolidated remuneration. The running of BRCs can also be outsourced by the SWSM to reputed NGOs. To achieve economy of scale, it will be desirable that in a district, all BRCs are managed by a single NGO/ out-sourcing agency that can be given upto 12% of the total expenditure as service remuneration or overhead (including service tax).

...5

ಕಾರಣ, NRDWP ಯೋಜನೆಯಡಿ NGO ಅಥವಾ ಹೊರಗುತ್ತಿಗೆ ಸಂಸ್ಥೆಯ ಮೂಲಕ BRC/CRC ಗಳ ಸೇವೆಯನ್ನು ಒಪ್ಪಂದದ ಮೇರೆಗೆ, ವಾರ್ಷಿಕ ನವೀಕರಣದ ಷರತ್ತಿಗೊಳಪಟ್ಟು ಪಡೆಯಲು ಅವಕಾಶವಿದ್ದಾಗ್ಯೂ, ಮಾನ್ಯ ನ್ಯಾಯಾಲಯವು ಸದರಿ ಸ್ಪಷ್ಟ ಮಾರ್ಗಸೂಚಿಯನ್ನು ಕಡೆಗಣಿಸಿ ನೀಡಲಾದ ತೀರ್ಪಿನ ವಿರುದ್ಧ ರಿಟ್ ಅಪೀಲು ಸಲ್ಲಿಸುವಂತೆ ಮಾನ್ಯ ಅಡ್ವೋಕೇಟ್ ಜನರಲ್ ರವರು ದಿನಾಂಕ:30.11.2018ರಂದು ಅಭಿಪ್ರಾಯಿಸಿರುವ ಹಿನ್ನೆಲೆಯಲ್ಲಿ ದಿನಾಂಕ:06.02.2019ರಂದು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ರಿಟ್ ಅಪೀಲನ್ನು ದಾಖಲಿಸಲಾಗಿದೆ (ರಿಟ್ ಅಪೀಲ್ ಸಂಖ್ಯೆ: 366/2019).

12. ದಿನಾಂಕ:18.01.2019ರಂದು ನಡೆದ ಸಭೆಯಲ್ಲಿ ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯು ಸರ್ವಾನುಮತದಿಂದ ವಿಷಯಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ನಿರ್ಣಯವನ್ನು ಕೈಗೊಂಡಿದೆ:

**ಈ ಅರ್ಜಿಗೆ ಸಂಬಂಧಪಟ್ಟಂತೆ ಅರ್ಜಿದಾರರ ಮನವಿ, ಕೋರ್ಟ್‌ನ ಆದೇಶ ಹಾಗೂ ಈ ವಿಚಾರದಲ್ಲಿ ಹಿಂದಿನ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ಯ ಸಚಿವರ ಅಭಿಪ್ರಾಯ, ಸಮಿತಿಯ ಮಾನ್ಯ ಸದಸ್ಯರುಗಳು ಸಮಿತಿ ಸಭೆಗಳಲ್ಲಿ ಈ ವಿಚಾರವಾಗಿ ಇಲಾಖಾಧಿಕಾರಿಗಳೊಂದಿಗೆ ಕೂಲಂಕಷವಾಗಿ ಚರ್ಚಿಸಿದ ವಿಷಯಗಳು ಮತ್ತು ಇದಕ್ಕೆ ಇಲಾಖೆಯ ಅಧಿಕಾರಿಗಳಿಂದ ಉತ್ತರ ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸಮಿತಿಯು ಈ ವಿಚಾರವಾಗಿ ಮುಂದಿನ ಕೋರ್ಟ್ ತೀರ್ಪಿಗೆ ಬದ್ಧರಾಗೋಣವೆಂದು ಹೇಳುತ್ತಾ, ಸದರಿ ನೌಕರರುಗಳನ್ನು ಅವರ ಕೋರಿಕೆಯಂತೆ, ಕೋರ್ಟ್‌ನ ಆದೇಶದಂತೆ ಅವರುಗಳನ್ನು ಮೊದಲು ಯಾವ ರೀತಿಯಲ್ಲಿ ನೇಮಕ ಮಾಡಿಕೊಳ್ಳಲಾಗಿತ್ತೋ ಅದೇ ರೀತಿಯಲ್ಲಿ ಮುಂದುವರೆಸುವಲ್ಲಿ ಸೂಕ್ತ ವ್ಯವಸ್ಥೆ ಮಾಡಿಕೊಳ್ಳುವಂತೆ ಇಲಾಖಾಧಿಕಾರಿಗಳಿಗೆ ನಿರ್ದೇಶಿಸಲಾಯಿತು.**

13. ಉಲ್ಲೇಖ(3)ರನ್ವಯ ಕಂಡಿಕೆ–1ರಲ್ಲಿ ವಿವರಿಸಿದಂತೆ, NRDWP ಯೋಜನೆಯಡಿ NGO ಅಥವಾ ಹೊರಗುತ್ತಿಗೆ ಸಂಸ್ಥೆಯ ಮೂಲಕ BRC/CRC ಗಳ ಸೇವೆಯನ್ನು ಒಪ್ಪಂದದ ಮೇರೆಗೆ, ವಾರ್ಷಿಕ ನವೀಕರಣದ ಷರತ್ತಿಗೊಳಪಟ್ಟು ಪಡೆಯಲು ಸ್ಪಷ್ಟ ನಿರ್ದೇಶವಿದ್ದಾಗ್ಯೂ, ರಾಜ್ಯ ನೀರು ಮತ್ತು ನೈರ್ಮಲ್ಯ ಮಿಷನ್ ವತಿಯಿಂದ ದಿನಾಂಕ:04.04.2011ರ ಪ್ರಕಟಣೆಯ ಮುಖಾಂತರ ನೇರವಾಗಿ BRC/CRC ಗಳ ಆಯ್ಕೆಯನ್ನು ಮಾಡಲು ಉದ್ದೇಶಿಸಿರುವುದು ಮಾರ್ಗಸೂಚಿಗಳಿಗೆ ವಿರುದ್ಧವಾಗಿದೆ.

14. ತದನಂತರ, ದಿನಾಂಕ:23.04.2012ರ ಸರ್ಕಾರದ ಆದೇಶದನ್ವಯ, BRC/CRC ಗಳ ಸೇವೆಯನ್ನು ದಿನಾಂಕ:30.04.2012ಕ್ಕೆ ಮುಕ್ತಾಯಗೊಳಿಸಲು ಆದೇಶಿಸಿರುವುದು ಮತ್ತು ದಿನಾಂಕ:04.07.2012ರ ಸರ್ಕಾರದ ಆದೇಶದನ್ವಯ ಸದರಿಯವರ ಸೇವೆಯನ್ನು NRDWP ಯೋಜನೆಯ ಮಾರ್ಗಸೂಚಿಗಳನ್ವಯ KTPP ಕಾಯ್ದೆಯ ಉಪಬಂಧಗಳಡಿ ಆಯ್ಕೆಗೊಂಡ NGO ಅಥವಾ ಹೊರಗುತ್ತಿಗೆ ಸಂಸ್ಥೆಗಳ ಮೂಲಕವೇ ಪಡೆಯತಕ್ಕದ್ದೆಂದು ಜಿಲ್ಲಾ ಪಂಚಾಯಿತಿಗಳಿಗೆ ಆದೇಶಿಸಿರುವುದು ಯುಕ್ತವಾಗಿದೆ.

15. NRDWP ಯೋಜನೆಯ ಮಾರ್ಗಸೂಚಿಗಳು ಹಾಗೂ ಮೇಲಿನ ಸರ್ಕಾರದ ಆದೇಶಗಳನ್ವಯ NGO ಅಥವಾ ಹೊರಗುತ್ತಿಗೆ ಸಂಸ್ಥೆಗಳ ಮೂಲಕ ಆಯ್ಕೆಗೊಂಡ 56 BRC ಗಳು ಹಾಗೂ 148 CRC ಗಳು ಪ್ರಸ್ತುತ 11 ಜಿಲ್ಲಾ ಪಂಚಾಯಿತಿಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. (ವಿವರಗಳು ಅನುಬಂಧದಲ್ಲಿರುವಂತೆ)

...6

16. NRDWP ಯೋಜನೆಯ ಮಾರ್ಗಸೂಚಿಗಳು ಹಾಗೂ ದಿನಾಂಕ:23.04.2012 ಹಾಗೂ ದಿ:04.07.2012ರ ಸರ್ಕಾರದ ಆದೇಶಗಳ ಹಿನ್ನೆಲೆಯಲ್ಲಿ ಕಂಡಿಕೆ-12ರಲ್ಲಿ ಉಲ್ಲೇಖಿಸಿದ ಸಮಿತಿಯ ನಿರ್ಣಯದ **"ಸದರಿ ನೌಕರರುಗಳನ್ನು ಅವರ ಕೋರಿಕೆಯಂತೆ, ಕೋರ್ಟ್‌ನ ಆದೇಶದಂತೆ ಅವರುಗಳನ್ನು ಮೊದಲು ಯಾವ ರೀತಿಯಲ್ಲಿ ನೇಮಕ ಮಾಡಿಕೊಳ್ಳಲಾಗಿತ್ತೋ ಅದೇ ರೀತಿಯಲ್ಲಿ ಮುಂದುವರೆಸುವಲ್ಲಿ ಸೂಕ್ತ ವ್ಯವಸ್ಥೆ ಮಾಡಿಕೊಳ್ಳುವಂತೆ ಇಲಾಖಾಧಿಕಾರಿಗಳಿಗೆ ನಿರ್ದೇಶಿಸಲಾಯಿತು"** ಎಂಬುದರ ಅನುಪಾಲನೆ ಯೋಜನೆಯ ಮಾರ್ಗಸೂಚಿಗಳು ಹಾಗೂ ಸರ್ಕಾರದ ಆದೇಶಗಳ ಸ್ಪಷ್ಟ ಉಲ್ಲಂಘನೆಯಾಗುತ್ತದೆ.

17. ತುಮಕೂರು ಜಿಲ್ಲಾ ಪಂಚಾಯಿತಿಯಲ್ಲಿ CRC ಎಂದು ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ ನೇಮಕಗೊಂಡು, ದಿನಾಂಕ:30.04.2012ರಂದು ಕಂಡಿಕೆ-5 ರಲ್ಲಿಯ ದಿನಾಂಕ:23.04.2012ರ ಸರ್ಕಾರದ ಆದೇಶದಂತೆ ಸೇವೆಯಿಂದ ಬಿಡುಗಡೆಗೊಂಡ ಶ್ರೀ ಕೆ.ಸಿ. ಮಧು ಹಾಗೂ ಶ್ರೀ ಹೆಚ್.ಎಸ್. ಸಂತೋಷ್‌ಕುಮಾರ್ ಇವರು ದಾಖಲಿಸಿದ ರಿಟ್ ಅರ್ಜಿಗಳ (ಸಂ:58147 ಮತ್ತು 58148/2013) ಸಂಬಂಧ ದಿನಾಂಕ:01.10.2018ರಂದು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರು ನೀಡಿದ ತೀರ್ಪಿನ ವಿರುದ್ಧ ದಿನಾಂಕ:06.02.2019ರಂದು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿಗಳು ಹಾಗೂ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆಯ ಆಯುಕ್ತರ ಪರವಾಗಿ ದಾಖಲಿಸಲಾದ ರಿಟ್ ಅಪೀಲ್ (ಸಂ:366/2019) ರಲ್ಲಿ ಮಾನ್ಯ ನ್ಯಾಯಾಲಯವು NRDWP ಯೋಜನೆಯ ಮಾರ್ಗಸೂಚಿಗಳನ್ವಯ ಹಾಗೂ ಸದರಿ ಮಾರ್ಗಸೂಚಿಗಳನ್ನಾಧರಿಸಿ ಹೊರಡಿಸಲಾದ ಸರ್ಕಾರದ ಆದೇಶಗಳಂತೆ BRC/CRC ಗಳ ಸೇವೆಯನ್ನು NGO ಅಥವಾ ಹೊರಗುತ್ತಿಗೆ ಸಂಸ್ಥೆಗಳ ಮೂಲಕ ಪಡೆದಿರುವ ಕ್ರಮಗಳನ್ನು ಪುರಸ್ಕರಿಸಿ ಸೂಕ್ತ ನ್ಯಾಯ ದೊರಕುವ ನಿರೀಕ್ಷೆ ಇದೆ.

18. ಈ ಹಿನ್ನೆಲೆಯಲ್ಲಿ, ಕಂಡಿಕೆ-12ರಲ್ಲಿ ಉಲ್ಲೇಖಿಸಿದ ಸಮಿತಿಯ ನಿರ್ಣಯದ **"ಈ ವಿಚಾರವಾಗಿ ಮುಂದಿನ ಕೋರ್ಟ್ ತೀರ್ಪಿಗೆ ಬದ್ಧರಾಗೋಣವೆಂದು ಹೇಳುತ್ತಾ"**..... ಎಂಬ ಅಂಶವು ವಿಷಯದ ಅಂತಿಮ ಸ್ವರೂಪವನ್ನು ನಿರ್ಧರಿಸುವಂತಹದಾಗಿದೆ.

2/3

ನಿರ್ದೇಶಕರು (WSSO),
ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಇಲಾಖೆ,

2) ಆಯುಕ್ತರು
ಗ್ರಾ. ಕು. ನೀ ಮತ್ತು ನೈ. ಇಲಾಖೆ

ಸರ್ಕಾರದ ನಿಲುವಿನ ಬಗ್ಗೆ ಮಾನ್ಯ ಗ್ರಾ.ಅ.ಪ ಸಚಿವರ ಅಧ್ಯಕ್ಷತೆಯಲ್ಲಿ ಸಭೆಯನ್ನು ಕರೆಯಬಹುದಾಗಿದೆ.

ಆಯುಕ್ತರು 25/03/19
ಗ್ರಾ.ಕು.ನೀ. ಓ ನೈ.ಇ.

3) ಪ್ರಧಾನ ಕಾರ್ಯದರ್ಶಿಗಳು, ಗ್ರಾ.ಅ.ಪ:-

ಎಲ್.ಕೆ. ಅತೀಕ್ ಭಾ.ಆ.ಸೇ. 2/3
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಇಲಾಖೆ

Pr. S... RD&PR No. 2.../3/19
Commr/RWS&SD 23/3/19

## ಕಛೇರಿ ಟಿಪ್ಪಣಿ

(8)

8) ದಿನಾಂಕ:18.01.2019ರಂದು ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯ ಸಭೆಯಲ್ಲಿ ಈ ಕೆಳಕಂಡಂತೆ ನಿರ್ಣಯ ಕೈಗೊಳ್ಳಲಾಗಿದೆ:

ಸಮಿತಿಯ ನಿರ್ಣಯ:

"ಈ ಅರ್ಜಿಗೆ ಸಂಬಂಧಪಟ್ಟಂತೆ, ಸಮಿತಿಯ ನಿರ್ಣಯ ಅರ್ಜಿದಾರರ ಮನವಿ, ಕೋರ್ಟ್‌ನ ಆದೇಶ ಹಾಗೂ ಈ ವಿಚಾರದಲ್ಲಿ ಹಿಂದಿನ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಅಭಿಪ್ರಾಯ, ಸಮಿತಿಯ ಮಾನ್ಯ ಸದಸ್ಯರುಗಳು ಸಮಿತಿ ಸಭೆಗಳಲ್ಲಿ ಈ ವಿಚಾರವಾಗಿ ಇಲಾಖಾಧಿಕಾರಿಗಳೊಂದಿಗೆ ಕೂಲಂಕಷವಾಗಿ ಚರ್ಚಿಸಿದ ವಿಷಯಗಳು ಮತ್ತು ಇದಕ್ಕೆ ಇಲಾಖೆಯ ಅಧಿಕಾರಿಗಳಿಂದ ಉತ್ತರ ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸಮಿತಿಯು ಈ ವಿಚಾರವಾಗಿ ಮುಂದಿನ ಕೋರ್ಟ್ ತೀರ್ಪಿಗೆ ಬದ್ಧರಾಗೋಣವೆಂದು ಹೇಳುತ್ತಾ, ಸದರಿ ನೌಕರರುಗಳನ್ನು ಅವರ ಕೋರಿಕೆಯಂತೆ, ಕೋರ್ಟ್‌ನ ಆದೇಶದಂತೆ ಅವರುಗಳನ್ನು ಮೊದಲು ಯಾವ ರೀತಿಯಲ್ಲಿ ನೇಮಕ ಮಾಡಿಕೊಳ್ಳಲಾಗಿತ್ತೋ ಅದೇ ರೀತಿಯಲ್ಲಿ ಮುಂದುವರಿಸುವಲ್ಲಿ ಸೂಕ್ತ ವ್ಯವಸ್ಥೆ ಮಾಡಿಕೊಳ್ಳುವಂತೆ ಇಲಾಖಾಧಿಕಾರಿಗಳಿಗೆ ನಿರ್ದೇಶಿಸಲಾಯಿತು".

9) ಈ ಕುರಿತು ಕಂಡಿಕೆ:16ರಲ್ಲಿ ವಿವರಿಸಿದಂತೆ, ಸದರಿ ನಿರ್ಣಯದ ಅನುಪಾಲನೆಯು NRDWP ಯೋಜನೆಯ ಮಾರ್ಗಸೂಚಿಗಳು ಹಾಗೂ ದಿ:23.04.2012ರ ಹಾಗೂ ದಿ:04.07.2012ರ ಸರ್ಕಾರದ ಆದೇಶಗಳ ಸ್ಪಷ್ಟ ಉಲ್ಲಂಘನೆಯಾಗುವುದರಿಂದ ಮತ್ತು ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯ, ಬೆಂಗಳೂರಿನಲ್ಲಿ ರಿಟ್ ಅರ್ಜಿಗಳ (ನಂ. 58147 ಮತ್ತು 58148/2013) ಸಂಬಂಧ ದಿನಾಂಕ:01.10.2018ರಂದು ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯ, ಬೆಂಗಳೂರು ನೀಡಿದ ತೀರ್ಪಿನ ವಿರುದ್ಧ ದಿನಾಂಕ:06.02.2019ರಂದು ರಿಟ್ ಅಪೀಲನ್ನು (ನಂ. 366/2019) ಕಂಡಿಕೆ: 11ರಲ್ಲಿ ಕಾಣಿಸಿದಂತೆ, ದಿನಾಂಕ:30.11.2018ರಂದು ಮಾನ್ಯ ಅಡ್ವೋಕೇಟ್ ಜನರಲ್ ರವರ ಕಾನೂನು ಅಭಿಪ್ರಾಯದ ಹಿನ್ನೆಲೆಯಲ್ಲಿ ದಾಖಲಿಸಿರುವ ಪ್ರಯುಕ್ತ, ಸದರಿ ಅಪೀಲ್ ಪ್ರಕರಣವು ವಿಚಾರಣೆಯ ಹಂತದಲ್ಲಿರುವುದರಿಂದ (Sub judice), ಅರ್ಜಿಗಳ ಸಮಿತಿಯ ನಿರ್ಣಯದ ಅನುಪಾಲನೆ ಕುರಿತು ಮಾನ್ಯ ಪ್ರಧಾನ ಕಾರ್ಯದರ್ಶಿಗಳ ಮುಖಾಂತರ ಕಾನೂನು ಇಲಾಖೆಯ ಅಭಿಪ್ರಾಯವನ್ನು ಪಡೆಯಲು ಕಡತವನ್ನು ಸಲ್ಲಿಸಿದೆ. TAL

15/6/19
ಸಮಾಲೋಚಕರು (IEC/ HRD)

10) ~~ನಿರ್ದೇಶಕರು (WSSO)~~ Ref para (8) & (9) may kindly be perused & pls give further orders.
15/6

Commnr/RWS&SD
ಸ್ವೀ. ದಿ: 15/6/19

11) Commissioner] Para 9 'A' for approval ಆಯುಕ್ತರು
19/06/19

Principal Secretary, RDPR –

10). ಟಿಎಸಿ ಸಮಿತಿಯ ನಿರ್ಣಯವನ್ನು ಜಾರಿಗೆ ತಂದರೆ NRDWP ಮಾರ್ಗಸೂಚಿಯ ಉಲ್ಲಂಘನೆ ಆಗುತ್ತದೆ. ಉಚ್ಚ ನ್ಯಾಯಾಲಯದಲ್ಲಿ ನಮ್ಮ ಅಪೀಲ್ ಬಾಕಿ ಇದೆ. ಆದ್ದರಿಂದ ಟಿಎಸಿ ಸಮಿತಿಯ ನಿರ್ಣಯವನ್ನು ಜಾರಿಗೆ ತರಲು ಕಾನೂನಿನ ತೊಡಕು ಇದೆ. ಉಚ್ಚ ನ್ಯಾಯಾಲಯದ ತೀರ್ಮಾನದ ನಂತರವೆ ನಿರ್ಣಯ ತೆಗೆದುಕೊಳ್ಳುವುದು ಸೂಕ್ತ. ಈ ಬಗ್ಗೆ ಕಾನೂನಿನ ಇಲಾಖೆಯ ಅಭಿಪ್ರಾಯ ಕೇಳಬಹುದು.

19/6

ಎಲ್.ಕೆ. ಅತೀಕ್ ಭಾ.ಆ.ಸೇ
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಇಲಾಖೆ

ಮಾನ್ಯ ಸಚಿವರು)



11).

ಕೃಷ್ಣ ಬೈರೇಗೌಡ
ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವರು

ಪ್ರ.ಕಾ., ಗ್ರಾ.ಕು.ನೀ. ಇಲಾಖೆ

ಪ್ರಧಾನ ಕಾರ್ಯದರ್ಶಿ ಕಾನೂನು ಇಲಾಖೆ

2/7/18

ಎಲ್.ಕೆ. ಅತೀಕ್ ಭಾ.ಆ.ಸೇ
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್‌ರಾಜ್ ಇಲಾಖೆ

ವಿಷಯ: ತಾಲ್ಲೂಕು ಮತ್ತು ಹೊಬಳಿ ಮಟ್ಟದ ಸಂಯೋಜಕರ ಮರು ನೇಮಕಾತಿ ಕುರಿತಂತೆ.

ಗ್ರಾಅಪ 69 ಗ್ರಾನೀಸ(2) 2015-16

ಲಾ 461 ಅಭಿಪ್ರಾಯ 2019
ದಿನಾಂಕ: 02.08.2019

12) ಆಡಳಿತ ಇಲಾಖೆಯು ಕಂಡಿಕೆ 8 ಮತ್ತು 9 ರಲ್ಲಿ ಕಾಣಿಸಿದ ಅಂಶಗಳ ಕುರಿತಂತೆ, ಕರ್ನಾಟಕ ರಾಜ್ಯ ನೀರು ಮತ್ತು ನೈರ್ಮಲ್ಯ ಮಿಶನ್ ನಿರ್ದೇಶಕರು ದಿನಾಂಕ 04.04.2011 ರಂದು ರಾಜ್ಯದ ಎಲ್ಲಾ ತಾಲ್ಲೂಕುಗಳಲ್ಲಿ ತಾಲ್ಲೂಕು ಮಟ್ಟದ ಸಂಯೋಜಕರು ಮತ್ತು ಹೋಬಳಿ ಮಟ್ಟದ ಸಂಯೋಜಕರ ತಾತ್ಕಾಲಿಕ ಹುದ್ದೆಗಳನ್ನು ಒಂದು ವರ್ಷದ ಅವಧಿಗೆ ತುಂಬಲು ಹಾಗೂ ಅಗತ್ಯ ಕಂಡುಬಂದಲ್ಲಿ ಸದರಿ ಹುದ್ದೆಗಳ ಸೇವಾವಧಿಯನ್ನು ವಿಸ್ತರಿಸುವ ಕುರಿತು ಪ್ರಕಟಣೆ ಹೊರಡಿಸಿರುತ್ತಾರೆ. ಅದರನುಸಾರ 176 ತಾಲ್ಲೂಕುಗಳ ಪೈಕಿ 151 ತಾಲ್ಲೂಕುಗಳಲ್ಲಿ 149 ತಾಲ್ಲೂಕು ಮಟ್ಟದ ಸಂಯೋಜಕರು ಹಾಗೂ 151 ತಾಲ್ಲೂಕುಗಳಲ್ಲಿ 563 ಹೋಬಳಿ ಮಟ್ಟದ ಸಂಯೋಜಕರನ್ನು ಆಯ್ಕೆ ಮಾಡಿದ್ದು ಸಂಬಂಧಪಟ್ಟ ಜಿಲ್ಲೆಗಳಿಗೆ ಆಯ್ಕೆ ಪಟ್ಟಿಯನ್ನು ದಿನಾಂಕ 23.04.2011 ರಂದು ಪ್ರಕಟಿಸಲು ಸೂಚಿಸಲಾಗಿರುತ್ತದೆ. ಮಿಶನ್ ನಿರ್ದೇಶಕರ ಸೂಚನೆಯ ಹಿನ್ನೆಲೆಯಲ್ಲಿ 149 ತಾಲ್ಲೂಕು ಮಟ್ಟದ ಸಂಯೋಜಕರು ಹಾಗೂ 563 ಹೋಬಳಿ ಮಟ್ಟದ ಸಂಯೋಜಕರನ್ನು ದಿನಾಂಕ 02.05.2011 ರಿಂದ ಜಾರಿಗೆ ಬರುವಂತೆ 1 ವರ್ಷದ ಅವಧಿಗೆ ತಾತ್ಕಾಲಿಕಾಗಿ ನೇಮಕಾತಿ ಆದೇಶ ನೀಡಿ ಕರಾರು ಪತ್ರಗಳನ್ನು ಪಡೆಯಲಾಗಿರುತ್ತದೆ. ಸರ್ಕಾರದ ಆದೇಶ ಸಂಖ್ಯೆ: **ಗ್ರಾಅಪ 97 ಗ್ರಾನೀಸ (5) 2011, ದಿನಾಂಕ 23.04.2012** ರನ್ವಯ ನೇಮಕವಾಗಿರುವ ತಾಲ್ಲೂಕು ಮತ್ತು ಹೋಬಳಿ ಮಟ್ಟದ ಸಂಯೋಜಕರುಗಳ ಸೇವೆಯನ್ನು ದಿನಾಂಕ 30.04.2012 ಕ್ಕೆ ಮುಕ್ತಾಯಗೊಳಿಸಲು ಉಲ್ಲೇಖ (3) ರ NRDWP ಯ ಮಾರ್ಗಸೂಚಿಯನ್ವಯ ದಿನಾಂಕ 30.04.2012 ರಂದು ವಜಾಗೊಳ್ಳಲಿರುವ ತಾಲ್ಲೂಕು ಮತ್ತು ಹೋಬಳಿ ಮಟ್ಟದ ಸಂಯೋಜಕರುಗಳ ಸೇವೆಯನ್ನು ಅಗತ್ಯವಿದ್ದಲ್ಲಿ ಅರ್ಹ ಸಂಸ್ಥೆಗಳನ್ನು ಆಯ್ಕೆ ಮಾಡಿ ಪಾರದರ್ಶಕ ನೀತಿಯನ್ವಯ ಸದರಿ ಸಂಸ್ಥೆಗಳ ಮೂಲಕ ಹೊರಗುತ್ತಿಗೆ ಆಧಾರದ ಮೇಲೆ ಸೇವೆಯನ್ನು ಪಡೆದುಕೊಳ್ಳುವ ನಿರ್ಧಾರವನ್ನು ಆಯಾ ಜಿಲ್ಲಾ ಪಂಚಾಯತಿಗಳು ಕೈಗೊಳ್ಳುವಂತೆ ಹಾಗೂ ಸೇವೆಯನ್ನು ನೇರವಾಗಿ ಮುಂದುವರೆಸಿ ಸೇವಾ ಕ್ರಮಬದ್ಧತೆ ಬಗ್ಗೆ, ಸೇವಾ ಭದ್ರತೆ, ವೇತನ ಇತ್ಯಾದಿ ಗೊಂದಲಗಳಿಗೆ ಆಸ್ಪದ ಕಲ್ಪಿಸದಂತೆ ಸ್ಪಷ್ಟಪಡಿಸಲಾಗಿರುತ್ತದೆ. ಸೇವೆಯಿಂದ ತೆಗೆದುಹಾಕಲ್ಪಟ್ಟ ಹಲವು ತಾಲ್ಲೂಕು ಹಾಗೂ ಹೋಬಳಿ ಮಟ್ಟದ ಸಂಯೋಜಕರು ಅವರ ಸೇವೆಯನ್ನು NRDWP ಯೋಜನೆಯ ಪೂರ್ಣ ಅವಧಿಯವರೆಗೆ ಮುಂದುವರೆಸಲು ಕೋರಿ ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯದಲ್ಲಿ ರಿಟ್ ಅರ್ಜಿಗಳನ್ನು ಸಲ್ಲಿಸಿದ್ದು, ಮಾನ್ಯ ನ್ಯಾಯಾಲಯವು ತನ್ನ ಆದೇಶದಲ್ಲಿ **ಅರ್ಜಿದಾರರಿಗೆ ಅವರ ಸೇವೆಯನ್ನು ಸಕ್ರಮಗೊಳಿಸುವಂತೆ ಕೋರಲು ಹಕ್ಕು ಇಲ್ಲದಿದ್ದಾಗ್ಯೂ 2ನೇ ಪ್ರತಿವಾದಿಯಾದ ಜಿಲ್ಲಾ ಪಂಚಾಯತಿಗೆ ಅವರ ಸೇವೆಯ ಅವಶ್ಯವಿದೆ ಎಂದು ತೋರಿದಲ್ಲಿ NRDWP ಯೋಜನೆ ಮುಕ್ತಾಯಗೊಳ್ಳುವವರೆಗೂ ಅವರ ಸೇವೆಯನ್ನು ಮುಂದುವರೆಸತಕ್ಕದ್ದು ಹಾಗೂ ಅರ್ಜಿದಾರರು ಈಗಾಗಲೇ ಕಾರ್ಯನಿರ್ವಹಿಸುತ್ತಿದ್ದು, ಅವರ ಸೇವೆ**

2/8

(12)

ವಿಷಯ: ತಾಲ್ಲೂಕು ಮತ್ತು ಹೊಬಳಿ ಮಟ್ಟದ ಸಂಯೋಜಕರ ಮರು ನೇಮಕಾತಿ ಕುರಿತಂತೆ.

**ಗ್ರಾಅಪ 69 ಗ್ರಾನೀಸ(2) 2015-16** **ಲಾ 461 ಅಭಿಪ್ರಾಯ 2019**

**ಅವಶ್ಯಕವಿದ್ದಲ್ಲಿ ಅವರನ್ನು NRDWP ಯೋಜನೆ ಮುಕ್ತಾಗೊಳ್ಳುವವರೆಗೂ ಸೇವೆಯಿಂದ ತೆಗೆದುಹಾಕತಕ್ಕದ್ದಲ್ಲ** ಎಂದು ಆದೇಶ ಮಾಡಿರುತ್ತದೆ. ಆಡಳಿತ ಇಲಾಖೆಯು ಮೇಲ್ಕಂಡ ರಿಟ್ ಅರ್ಜಿಗಳ ಆದೇಶದ ವಿರುದ್ಧ ಮಾನ್ಯ ಅಡ್ವೋಕೇಟ್ ಜನರಲ್‌ರವರು ದಿನಾಂಕ 30.11.2018 ರಂದು ಅಭಿಪ್ರಾಯಿಸಿದ ಪ್ರಕಾರ **ರಿಟ್ ಅಪೀಲು ಸಂಖ್ಯೆ: 366/20169** ನ್ನು ದಾಖಲಿಸಿರುವುದಾಗಿ ಕಂಡಿಕೆ 11 ರಲ್ಲಿ ಉಲ್ಲೇಖಿಸಿರುತ್ತದೆ.

13) ಮುಂದುವರೆದು, ಕಂಡಿಕೆ 12 ರಲ್ಲಿ ಕಾಣಸಿಗುವಂತೆ ದಿನಾಂಕ 18.01.2019 ರಂದು ನಡೆದ ಸಭೆಯಲ್ಲಿ ಮಾನ್ಯ **ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯು ಸರ್ವಾನುಮತದಿಂದ** ಈ ಅರ್ಜಿಗೆ ಸಂಬಂಧಪಟ್ಟಂತೆ ಅರ್ಜಿದಾರರ ಮನವಿ, ಕೋರ್ಟ್ ಆದೇಶ ಹಾಗೂ ಈ ವಿಚಾರದಲ್ಲಿ ಹಿಂದಿನ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರ ಅಭಿಪ್ರಾಯ ಮತ್ತು ಸಮಿತಿ ಸಭೆಗಳಲ್ಲಿ ಚರ್ಚಿಸಿದ ವಿಷಯಗಳು **ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸಮಿತಿಯು ಈ ವಿಚಾರವಾಗಿ ಮುಂದಿನ ಕೋರ್ಟ್ ತೀರ್ಪಿಗೆ ಬದ್ಧರಾಗೋಣವೆಂದು ಹೇಳುತ್ತಾ, ಸದರಿ ನೌಕರರನ್ನು ಅವರ ಕೋರಿಕೆಯಂತೆ ಕೋರ್ಟ್ ಆದೇಶದ ಮೇರೆಗೆ ಮೊದಲು ಯಾವ ರೀತಿಯಲ್ಲಿ ನೇಮಕ ಮಾಡಿಕೊಳ್ಳಲಾಗಿತ್ತೋ ಅದೇ ರೀತಿಯಲ್ಲಿ ಮುಂದುವರೆಸುವಲ್ಲಿ ಸೂಕ್ತ ವ್ಯವಸ್ಥೆ ಮಾಡಿಕೊಳ್ಳುವಂತೆ ಇಲಾಖಾಧಿಕಾರಿಗಳಿಗೆ ನಿರ್ದೇಶಿಸಲಾಯಿತು** ಎಂದು ತೀರ್ಮಾನಿಸಿದ ಕುರಿತು ಉಲ್ಲೇಖ ಕಾಣಸಿಗುತ್ತದೆ. ಕಂಡಿಕೆ 13 ರಲ್ಲಿ ಉಲ್ಲೇಖ (3) ರನ್ವಯ NRDWP ಯೋಜನೆಯಡಿ ನೈರ್ಮಲ್ಯ ಮಿಶನ್ ವತಿಯಿಂದ ನೇರವಾಗಿ ತಾಲ್ಲೂಕು ಮತ್ತು ಹೋಬಳಿ ಮಟ್ಟದ ಸಂಯೋಜಕರನ್ನು ಆಯ್ಕೆ ಮಾಡಲು ಉದ್ದೇಶಿಸಿರುವುದು ಮಾರ್ಗ ಸೂಚಿಗಳಿಗೆ ವಿರುದ್ಧವಾಗಿದೆ ಎಂಬ ಉಲ್ಲೇಖ ಕಾಣಸಿಗುತ್ತದೆ. ಈ ಹಿನ್ನಲೆಯಲ್ಲಿ ಮಾನ್ಯ **ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯು** ನೀಡಿದ ನಿರ್ದೇಶನ ಪಾಲನೆಯ ಕುರಿತಂತೆ ಆಡಳಿತ ಇಲಾಖೆಯು ಅಭಿಪ್ರಾಯವನ್ನು ಕೋರಿರುತ್ತದೆ.

14 ಮುಂದುವರೆದು, ಆಡಳಿತ ಇಲಾಖೆಯು ಕಂಡಿಕೆ 11 ಮತ್ತು ಕಛೇರಿ ಟಿಪ್ಪಣಿ ಕಂಡಿಕೆ 9 ರಲ್ಲಿ ಈ ಹಿಂದೆ ತಾಲ್ಲೂಕು ಹಾಗೂ ಹೋಬಳಿ ಮಟ್ಟದ ಸಂಯೋಜಕರು ಸಲ್ಲಿಸಿದ್ದ ರಿಟ್ ಅರ್ಜಿಗಳ ತೀರ್ಪಿನ ವಿರುದ್ಧ ಮಾನ್ಯ ಅಡ್ವೋಕೇಟ್ ಜನರಲ್‌ರವರ ಅಭಿಪ್ರಾಯದಂತೆ ರಿಟ್ ಅಪೀಲು ಸಂಖ್ಯೆ: 366/2019 ನ್ನು ದಾಖಲಿಸಿರುವುದಾಗಿ ಉಲ್ಲೇಖಿಸಿರುತ್ತದೆ. ಆಡಳಿತ ಇಲಾಖೆಯು ಕಡತದಲ್ಲಿ ಸದರಿ ರಿಟ್ ಅಪೀಲಿನಲ್ಲಿ ಈ ಹಿಂದೆ ಮಾನ್ಯ ನ್ಯಾಯಾಲಯವು ರಿಟ್ ಅರ್ಜಿಗಳಲ್ಲಿ ಮಾಡಿದ ಆದೇಶದ ವಿರುದ್ಧ ಯಾವುದಾದರೂ ತಡೆಯಾಜ್ಞೆಯನ್ನು ನೀಡಿದೆಯೇ? ಅಥವಾ ಇಲ್ಲವೇ? ಎಂಬ ಬಗ್ಗೆ ಯಾವುದೇ ಮಾಹಿತಿಯನ್ನು ಒದಗಿಸಿರುವುದು ಕಾಣಸಿಗುವುದಿಲ್ಲ. ಆಡಳಿತ ಇಲಾಖೆಯು ನೇರವಾಗಿ NRDWP ಯೋಜನೆಯ ಮಿಶನ್ ಮೂಲಕ ಆಯ್ಕೆ ಮಾಡಲು ಉದ್ದೇಶಿಸಿರುವುದು ಮಾರ್ಗಸೂಚಿಗಳಿಗೆ ವಿರುದ್ಧವಾಗಿದೆ ಎಂದು ಉಲ್ಲೇಖಿಸಿರುವುದು ಕಾಣಸಿಗುತ್ತದೆ. ಆಡಳಿತ ಇಲಾಖೆಯು ಕಂಡಿಕೆ 6 ರಲ್ಲಿ ಉಲ್ಲೇಖಿಸಿದಂತೆ ರಿಟ್

2/8

ವಿಷಯ: ತಾಲ್ಲೂಕು ಮತ್ತು ಹೋಬಳಿ ಮಟ್ಟದ ಸಂಯೋಜಕರ ಮರು ನೇಮಕಾತಿ ಕುರಿತಂತೆ.

ಗ್ರಾಅಪ 69 ಗ್ರಾನೀಸ(2) 2015-16 | ಲಾ 461 ಅಭಿಪ್ರಾಯ 2019

ಅರ್ಜಿದಾರರ ಸೇವೆಯು ಅವಶ್ಯಕವಿದೆ ಎಂದು ತೋರಿದಲ್ಲಿ ಜಿಲ್ಲಾ ಪಂಚಾಯತಿಗಳು ಸದರಿ ಯೋಜನೆ ಮುಕ್ತಾಯವಾಗುವವರೆಗೂ ರಿಟ್ ಅರ್ಜಿದಾರರ ಸೇವೆಯನ್ನು ಮುಂದುವರೆಸತಕ್ಕದ್ದು ಹಾಗೂ ಒಂದು ವೇಳೆ ರಿಟ್ ಅರ್ಜಿದಾರರು ಈಗಾಗಲೇ ಕಾರ್ಯ ನಿರ್ವಹಿಸುತ್ತಿದ್ದಲ್ಲಿ ಹಾಗೂ ಅವರ ಸೇವೆ ಅವಶ್ಯಕವಿದ್ದಲ್ಲಿ ಯೋಜನೆ ಮುಕ್ತಾಯವಾಗುವವರೆಗೆ ರಿಟ್ ಅರ್ಜಿದಾರರನ್ನು ಸೇವೆಯಿಂದ ತೆಗೆದುಹಾಕತಕ್ಕದಲ್ಲ ಎಂದು ಆದೇಶ ಮಾಡಿರುತ್ತದೆ ಎಂಬುದು ಕಾಣಸಿಗುತ್ತದೆ. ಕಡತದಲ್ಲಿ ಆಡಳಿತ ಇಲಾಖೆಯು ಕಂಡಿಕೆಗಳಲ್ಲಿ ಉಲ್ಲೇಖಿಸಿದ ಯಾವುದೇ ರಿಟ್ ಅರ್ಜಿ ಮತ್ತು ರಿಟ್ ಅಪೀಲಿನ ಆದೇಶದ ಪ್ರತಿಗಳನ್ನು ಒದಗಿಸಿಲ್ಲವಾದ್ದರಿಂದ ಕೇವಲ ಕಡತದ ಕಂಡಿಕೆಗಳಲ್ಲಿ ಉಲ್ಲೇಖಿಸಿದ ಮಾಹಿತಿಯ ಆಧಾರದ ಮೇಲೆ ಮಾನ್ಯ ಉಚ್ಛ ನ್ಯಾಯಾಲಯ ಏನು ಆದೇಶ ಮಾಡಿದೆ? ಎಂಬ ಬಗ್ಗೆ ಪೂರ್ಣ ಮಾಹಿತಿ ಲಭ್ಯವಿಲ್ಲವಾದ್ದರಿಂದ ಈ ಬಗ್ಗೆ ಕಾನೂನು ಇಲಾಖೆಯು ಸ್ಪಷ್ಟ ಅಭಿಪ್ರಾಯ ನೀಡಲು ಸಾಧ್ಯವಿರುವುದಿಲ್ಲ. ಈ ಎಲ್ಲಾ ಕಾರಣಗಳಿಂದ ಹಾಗೂ ಮಾನ್ಯ ನ್ಯಾಯಾಲಯದ ಮುಂದೆ ಈಗಾಗಲೇ ರಿಟ್ ಅಪೀಲು ಸಂಖ್ಯೆ: 366/2019 ವಿಚಾರಣೆ ನಡೆಯುತ್ತಿದೆ ಎಂದು ಉಲ್ಲೇಖಿಸಿರುವ ಹಿನ್ನೆಲೆಯಲ್ಲಿ Res-Subjudice ತತ್ವ ಅನ್ವಯವಾಗುವುದರಿಂದ ಕಾನೂನು ಇಲಾಖೆಯು ವಿಚಾರಣೆ ನಡೆಯುತ್ತಿರುವ ಪ್ರಕರಣದ ಬಗ್ಗೆ ಅಭಿಪ್ರಾಯ ನೀಡಲು ಅವಕಾಶವಿಲ್ಲವಾದ್ದರಿಂದ ಆಡಳಿತ ಇಲಾಖೆಗೆ ಮೇಲ್ಕಂಡ ಕಡತದ ಬಗ್ಗೆ ಮಾನ್ಯ ಅಡ್ವೋಕೇಟ್ ಜನರಲ್‌ರವರಿಂದ ಅಭಿಪ್ರಾಯ ಪಡೆಯುವಂತೆ ಸೂಚಿಸಿಬಹುದಾಗಿರುತ್ತದೆ ಎಂಬುದು ಕಾನೂನು ಇಲಾಖೆಯ ಅಭಿಪ್ರಾಯವಾಗಿರುತ್ತದೆ.

14) ಸರ್ಕಾರದ ಮಾನ್ಯ ವಿಶೇಷ ಕಾರ್ಯದರ್ಶಿಯವರಿಂದ ಅನುಮೋದಿಸಲ್ಪಟ್ಟಿದೆ.

[signature] 2/8/19

(ಮಧುಸೂಧನ ಡಿ.ಕೆ.)
ಸರ್ಕಾರದ ಉಪ ಕಾರ್ಯದರ್ಶಿ(ಅಭಿಪ್ರಾಯ-2) (ಪ್ರ)
2/8 ಕಾನೂನು ಇಲಾಖೆ

15)
ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಹಾಗೂ ಪಂಚಾಯತ್ ರಾಜ್ ಇಲಾಖೆ.

[signature] 5/8

16).
[signature]

DS(RDWSD) to please follow up in the HHC(K), meet the advocate and update on the progress.

[signature]
05/08/19

No. 5751 Dt. 3/8/19

## ಕೇಂದ್ರ ಸರ್ಕಾರದ NRDWP ಅಡಿ ತಾತ್ಕಾಲಿಕವಾಗಿ ನೇಮಕಗೊಂಡ BRC ಮತ್ತು CRC ಗಳ ಕುರಿತ ಟಿಪ್ಪಣಿ:

NRDWP ಮಾರ್ಗಸೂಚಿಗಳನ್ವಯ ಕುಡಿಯುವ ನೀರಿನ ಯೋಜನೆಗಳಿಗೆ ಸಂಬಂಧಿಸಿದ ನೀರಿನ ಗುಣಮಟ್ಟ ಪರೀಕ್ಷೆ, ಅವುಗಳ ದಾಖಲಾತಿ ಹಾಗೂ ಗ್ರಾಮಗಳಲ್ಲಿ ಸಾಮಾಜಿಕ ಅಭಿವೃದ್ಧಿ ಚಟುವಟಿಕೆಗಳನ್ನು ನಿರ್ವಹಿಸಲು ನೇಮಕಗೊಂಡ ಬಿ.ಆರ್.ಸಿ. ಮತ್ತು ಸಿ.ಆರ್.ಸಿ.ಗಳ ಕುರಿತ ಘಟನಾವಳಿಗಳ ಕಾಲಾನುಕ್ರಮ (***Chronological order***) ಟಿಪ್ಪಣಿ:

i. ಅರ್ಹ ಅಭ್ಯರ್ಥಿಗಳಿಂದ ಬಿ.ಆರ್.ಸಿ. ಮತ್ತು ಸಿ.ಆರ್.ಸಿ.ಗಳ ನೇಮಕ ಸಂಬಂಧ **ದಿನಾಂಕ:04.04.2011ರಂದು** ದಿನಪತ್ರಿಕೆ ಜಾಹಿರಾತು ಮೂಲಕ ಅರ್ಜಿ ಆಹ್ವಾನಿಸಿ, **ದಿನಾಂಕ:21.04.2011ರಂದು** ಲಿಖಿತ ಪರೀಕ್ಷೆ ನಡೆಸಿ, ತಾತ್ಕಾಲಿಕವಾಗಿ ಒಂದು ವರ್ಷದ ಅವಧಿಗೆ, ಗುತ್ತಿಗೆ ಆಧಾರದ ಮೇಲೆ ರಾಜ್ಯದ 25 ಜಿಲ್ಲೆಗಳ ವ್ಯಾಪ್ತಿಯಲ್ಲಿ 149 ಬಿಆರ್‌ಸಿಗಳು ಮತ್ತು 563 ಸಿಆರ್‌ಸಿಗಳನ್ನು ಆಯ್ಕೆಮಾಡಲಾಗಿರುತ್ತದೆ ಉಳಿದ ಜಿಲ್ಲೆಗಳಾದ ರಾಯಚೂರು, ಕೋಲಾರ, ಕೊಪ್ಪಳ, ರಾಮನಗರ ಮತ್ತು ಯಾದಗಿರಿ ಜಿಲ್ಲಾ ಪಂಚಾಯತಿಗಳಲ್ಲಿ ಬಿಆರ್‌ಸಿ/ಸಿಆರ್‌ಸಿಗಳ ನೇಮಕಾತಿ ಮಾಡಿರುವುದಿಲ್ಲ **(ಅಡಕ 1ನ್ನು ಅವಗಾಹಿಸುವುದು)**.

ii. ಒಂದು ವರ್ಷ ಪೂರ್ಣಗೊಂಡ ನಂತರ, **ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 97 ಗ್ರಾನೀಸ (5) 2011 ಬೆಂಗಳೂರು, ದಿನಾಂಕ:23.04.2012**ರಲ್ಲಿ ಬಿ.ಆರ್.ಸಿ./ಸಿ.ಆರ್.ಸಿ.ಗಳ ಸೇವೆಯನ್ನು ದಿನಾಂಕ:30.04.2012ಕ್ಕೆ ಮುಕ್ತಾಯಗೊಳಿಸಲಾಗಿರುತ್ತದೆ **(ಅಡಕ 2ನ್ನು ಅವಗಾಹಿಸುವುದು)**.

iii. ಜಿಲ್ಲಾ ಮಟ್ಟದ ಅಗತ್ಯತೆ ಮತ್ತು ಬೇಡಿಕೆ ಆಧರಿಸಿ NRDWP ಮಾರ್ಗಸೂಚಿಗಳನ್ವಯ, ಹೊರಗುತ್ತಿಗೆ ಆಧಾರದ ಮೇಲೆ KTPP ನಿಯಮಾವಳಿಗಳನ್ನೊಳಗೊಂಡಂತೆ ಬಿಆರ್‌ಸಿ/ಸಿಆರ್‌ಸಿಗಳ ಸೇವೆಯನ್ನು ಪಡೆಯುವ ಸಂಬಂಧ ಸರ್ಕಾರದ ಆದೇಶ **ಸಂಖ್ಯೆ:ಗ್ರಾಅಪ 97 ಗ್ರಾನೀಸ (5) 2011 ಬೆಂಗಳೂರು, ದಿನಾಂಕ:04.07.2012**ರಲ್ಲಿ ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸೂಚನೆ ನೀಡಲಾಗಿದೆ **(ಅಡಕ 3ನ್ನು ಅವಗಾಹಿಸುವುದು)**.

iv. ಬೆಂಗಳೂರು ನಗರ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸಿಆರ್‌ಸಿಗಳಾದ ಪಿ.ಎಸ್. ಶೋಭಾ, ಎಸ್. ಶಾರದಮ್ಮ, ರಾಮಾಂಜಿನಪ್ಪ ಮತ್ತು ಬಿಆರ್‌ಸಿಯಾದ ಅಂಜನಪ್ಪ ಹಾಗೂ ತುಮಕೂರು ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಬಿಆರ್‌ಸಿಗಳಾದ ಎಸ್. ಚಿಕ್ಕಣ್ಣ, ಡಿ. ರಂಗನಾಥ್ ಹಾಗೂ ಸಿಆರ್‌ಸಿಯಾದ ಪಿ.ಎನ್. ದಿನೇಶ್‌ಕುಮಾರ್ ಮತ್ತು ಚಾಮರಾಜನಗರ ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ, ಬಿಆರ್‌ಸಿಯಾದ ಬಿ. ಲಿಂಗರಾಜು ಮತ್ತು ಸಿಆರ್‌ಸಿಯಾದ ಎಸ್. ಮಹೇಶ್‌ರವರುಗಳು ದಿನಾಂಕ:23.04.2012ರ ಸರ್ಕಾರದ ಆದೇಶ ಪ್ರಶ್ನಿಸಿ, ಮಾನ್ಯ ಉಚ್ಚ ನ್ಯಾಯಾಲಯದಲ್ಲಿ WP ಸಂಖ್ಯೆ:23849–23851/2012, WP ಸಂಖ್ಯೆ:16301–16302/2012, WP ಸಂಖ್ಯೆ:17303–17304/2012 ಮತ್ತು WP ಸಂಖ್ಯೆ:24079–24080/2012 ಗಳಲ್ಲಿ ಅವರುಗಳ ಸೇವೆಯನ್ನು ಮುಂದುವರೆಸುವಂತೆ ಕೋರಿ ದಾವೆ ಹೂಡಿದ್ದು, **ದಿನಾಂಕ:20.07.2012**ರಂದು ಮಾನ್ಯ ಉಚ್ಚ ನ್ಯಾಯಾಲಯವು ಈ ಕೆಳಕಂಡಂತೆ ತೀರ್ಪು ನೀಡಿದೆ:

> *4. "No doubt, the post held by the petitioners was under a particular scheme and is purely temporary in nature, however, they were appointed in the scheme called National Rural Drinking Water Program and that scheme is yet to be completed. Apart from this, the Taluk Panchayat has also expressed that the services of these petitioners are essential. There is also no bar under*

*Annexure-E dated 23.04.2012 wherein it is stated that in case there is any need, the Panchayat can continue the services of these petitioners on contract basis".*

*5. "Having regard to these circumstances, even if the petitioners have no right to seek regularization of services, nevertheless, the Taluk Panchayat has informed the Zilla Panchayat as to the need of continuing the services of these petitioners. Respondent No.2- Zilla Panchayat may consider as to whether the services of these petitioners is required to be continued and if there is requirement, the respondents shall continue their services at least till the completion of the scheme. Further, if the petitioners are already working and if there is need of their services, they need not be discontinued till the completion of the scheme"* (ಅಡಕ 4ನ್ನು ಅವಗಾಹಿಸುವುದು).

v. ಕೆಲವೊಂದು ಜಿಲ್ಲಾ ಪಂಚಾಯತಿಗಳು ಬಿಆರ್‌ಸಿ/ಸಿಆರ್‌ಸಿಗಳ ಸೇವೆಯನ್ನು ಮುಂದುವರಿಸುವ ಕುರಿತು ಅನುಮತಿ ಕೋರಿದ್ದರ ಮೇರೆಗೆ, ಸರ್ಕಾರದ ಆದೇಶ **ಸಂಖ್ಯೆ:ಗ್ರಾಅಪ 97 ಗ್ರಾನೀಸ (5) 2011 ಬೆಂಗಳೂರು, ದಿನಾಂಕ:12.06.2013ರಲ್ಲಿ,** ಬಿಆರ್‌ಸಿ/ಸಿಆರ್‌ಸಿಗಳ ಸೇವೆಯನ್ನು ಮುಂದುವರಿಸುವ ಕುರಿತು ಆಯಾ ಜಿಲ್ಲಾ ಪಂಚಾಯತಿಯ ಹಂತದಲ್ಲಿಯೇ ಕ್ರಮವಹಿಸಲು ಸೂಚಿಸಲಾಗಿದೆ **(ಅಡಕ 5ನ್ನು ಅವಗಾಹಿಸುವುದು).**

vi. ಮಾನ್ಯ ಉಚ್ಛ ನ್ಯಾಯಾಲಯದ ಆದೇಶವನ್ನನುಸರಿಸಿ, ಸರ್ಕಾರದ ಆದೇಶ **ಸಂಖ್ಯೆ:ಗ್ರಾಅಪ 93 ಗ್ರಾನೀಸ (2) 2012 ಬೆಂಗಳೂರು, ದಿನಾಂಕ:26.09.2013ರಲ್ಲಿ,** ಬಿಆರ್‌ಸಿ/ಸಿಆರ್‌ಸಿಗಳ ಸೇವೆಯನ್ನು ಅರ್ಹ ಸಂಸ್ಥೆಗಳಿಂದ (NGO) ಹೊರಗುತ್ತಿಗೆ ಆಧಾರದಲ್ಲಿ KTPP ನಿಯಮಾವಳಿಗಳನ್ವಯ ನೇಮಿಸಿಕೊಂಡು, NRDWP ಮಾರ್ಗಸೂಚಿಗಳನ್ವಯ ಕಾರ್ಯನಿರ್ವಹಿಸುವಂತೆ ಜಿಲ್ಲಾ ಪಂಚಾಯಿತಿಗಳಿಗೆ ಸೂಚನೆ ನೀಡಲಾಗಿದೆ **(ಅಡಕ 6ನ್ನು ಅವಗಾಹಿಸುವುದು).**

vii. ತುಮಕೂರು ಮತ್ತು ಶಿವಮೊಗ್ಗ ಜಿಲ್ಲಾ ಪಂಚಾಯತಿಗಳು ಬಿಆರ್‌ಸಿ/ ಸಿಆರ್‌ಸಿಗಳ ಸೇವೆಯನ್ನು ಮುಂದುವರಿಸುವ/ ನವೀಕರಿಸುವ ಕುರಿತು ಕ್ರಮವಾಗಿ ದಿನಾಂಕ:14.05.2014 ಮತ್ತು 12.06.2014ರ ಪತ್ರಗಳ ಮುಖೇನ ಅನುಮತಿ ಕೋರಿದ್ದರ ಮೇರೆಗೆ, **ಸಂಖ್ಯೆ:ಗ್ರಾಅಪ 34 ಗ್ರಾನೀಸ (5) 2014 ಬೆಂಗಳೂರು, ದಿನಾಂಕ:25.06.2014ರ ಸರ್ಕಾರದ ಆದೇಶದಲ್ಲಿ** ಬಿಆರ್‌ಸಿ/ ಸಿಆರ್‌ಸಿಗಳ ಸೇವೆಯನ್ನು KTPP ನಿಯಮಾವಳಿಗಳನ್ವಯ, ಗೊತ್ತುಪಡಿಸಿದ ಅರ್ಹ ಸಂಸ್ಥೆಗಳ (NGO) ಮುಖೇನ ಹೊರಗುತ್ತಿಗೆ ಆಧಾರದ ಮೇಲೆ ದಿನಾಂಕ:31.03.2015ರ ವರೆಗೆ ಮುಂದುವರೆಸಲು/ ನವೀಕರಿಸಲು ಜಿಲ್ಲಾ ಪಂಚಾಯತಿಯ ಹಂತದಲ್ಲಿಯೇ ಕ್ರಮವಹಿಸಲು ಆದೇಶಿಸಲಾಗಿದೆ **(ಅಡಕ 7ನ್ನು ಅವಗಾಹಿಸುವುದು).**

viii. **ಸರ್ಕಾರದ ಪತ್ರ ಸಂಖ್ಯೆ:ಗ್ರಾಅಪ 71 ಗ್ರಾನೀಸ(2) 2015, ದಿನಾಂಕ:03.08.2015ರಲ್ಲಿ,** ಅರ್ಹ ಸಂಸ್ಥೆಗಳ (NGO) ಮುಖೇನ ಹೊರಗುತ್ತಿಗೆ ಆಧಾರದ ಮೇಲೆ ಬಿಆರ್‌ಸಿ/ಸಿಆರ್‌ಸಿಗಳ ಸೇವೆಯನ್ನು, ಅವರುಗಳಿಗೆ ತೊಂದರೆಯಾಗದಂತೆ ಮುಂದಿನ ಆದೇಶದವರೆಗೆ ಮುಂದುವರಿಸಲು ಕ್ರಮವಹಿಸಬೇಕೆಂದು ಎಲ್ಲಾ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳನ್ನು ಸೂಚಿಸಲಾಗಿದೆ **(ಅಡಕ 8ನ್ನು ಅವಗಾಹಿಸುವುದು).**

ix. **ಸರ್ಕಾರದ ಪತ್ರ ಸಂಖ್ಯೆ: ಗ್ರಾಅಪ 69 ಗ್ರಾನೀಸ(2) 2015, ದಿನಾಂಕ:03.11.2017ರಲ್ಲಿ** ಮಾನ್ಯ ಉಚ್ಛ ನ್ಯಾಯಾಲಯವು ರಿಟ್ ಅರ್ಜಿ ಸಂಖ್ಯೆ:23849-23851/2012 ಹಾಗೂ ಸಂಬಂಧಿತ ಅರ್ಜಿಗಳಲ್ಲಿ ದಿನಾಂಕ:20.07.2012ರಂದು ನೀಡಿರುವ ತೀರ್ಪಿನಂತೆ ನಿಯಮಾನುಸಾರ ತಮ್ಮ ಹಂತದಲ್ಲಿಯೇ ಅಗತ್ಯ ಕ್ರಮ ಕೈಗೊಳ್ಳಲು ಸದರಿ ರಿಟ್ ಅರ್ಜಿಗಳಲ್ಲಿನ 'ರೆಸ್ಪಾಂಡೆಂಟ್-2' ಆಗಿರುವ ಜಿಲ್ಲಾ ಪಂಚಾಯತಿಗಳ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಗಳಿಗೆ ಸೂಚಿಸಲಾಗಿರುತ್ತದೆ (ಅಡಕ 9ನ್ನು ಅವಗಾಹಿಸುವುದು).

x. ತದನಂತರ, ತುಮಕೂರಿನ ಸಂತೋಷ್ ಕುಮಾರ್ ಹೆಚ್.ಎಸ್. ಮತ್ತು ಮಧು .ಸಿ, ಸಿ.ಆರ್.ಸಿ.ಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ರಿಟ್ ಅರ್ಜಿಗಳನ್ನು (W.P. Nos: 58147-58148/2013) ದಾಖಲಿಸಿ, ತಮ್ಮನ್ನು NRDWP ಮತ್ತು TSC ಯೋಜನೆಗಳು ಮುಕ್ತಾಯಗೊಳ್ಳುವವರೆಗೂ ಮುಂದುವರೆಸಲು ಹಾಗೂ ತಮ್ಮನ್ನು ಸ್ವಯಂಸೇವಾ ಸಂಸ್ಥೆಗಳಡಿ ಕಾರ್ಯನಿರ್ವಹಿಸದಂತೆ ಪ್ರತಿವಾದಿಗಳಿಗೆ ನಿರ್ದೇಶಿಸಲು ಕೋರಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ಈ ಕೆಳಗಿನಂತೆ ದಿನಾಂಕ:01.10.2018ರಂದು ತೀರ್ಪನ್ನು ನೀಡಿದೆ. **(ಅಡಕ 10ನ್ನು ಅವಗಾಹಿಸುವುದು)**.

***5. "The terms and conditions as per the notification is to work for one year and thereafter they will be terminated from the service after one year. But now the workers are still in service under the contract. Though the scheme continues, but for no REASON and without any rationale the 1st respondent created NGOs and handed over these petitioners to work under them, which is contrary and impermissible as per the scheme.***

***6. Be that as it may, in case if it is mentioned in the scheme to do so, it is for the respondents to do it as per the notification. Unless and until the scheme permits, it is impermissible for the respondents to create NGOs for the purpose of handing over the workers for service and maintenance. By virtue of the scheme introduced by the Union Government, these workers are permitted to work under the said Scheme and not under NGOs. The petitioners to work under the Scheme under which they have been appointed as long as the scheme continues. The payment, guarantees, terms and conditions are strictly and purely in accordance with the scheme introduced by the Union Government only.***

***7. With these observations, the petitions stand disposed of".***

xi. ಈ ಮಧ್ಯೆ ದಿನಾಂಕ:18.01.2019ರಂದು ನಡೆದ ಸಭೆಯಲ್ಲಿ ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯು ಸರ್ವಾನುಮತದಿಂದ ವಿಷಯಕ್ಕೆ ಸಂಬಂಧಿಸಿದಂತೆ ಈ ಕೆಳಕಂಡ ನಿರ್ಣಯವನ್ನು ಕೈಗೊಂಡಿದೆ.

**ಈ ಅರ್ಜಿಗೆ ಸಂಬಂಧಪಟ್ಟಂತೆ ಅರ್ಜಿದಾರರ ಮನವಿ. ಕೋರ್ಟ್‌ನ ಆದೇಶ ಹಾಗೂ ಈ ವಿಚಾರದಲ್ಲಿ ಹಿಂದಿನ ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ ಸಚಿವರ ಅಭಿಪ್ರಾಯ, ಸಮಿತಿಯ ಮಾನ್ಯ ಸದಸ್ಯರುಗಳು ಸಮಿತಿ ಸಭೆಗಳಲ್ಲಿ ಈ ವಿಚಾರವಾಗಿ ಇಲಾಖಾ ಅಧಿಕಾರಿಗಳೊಂದಿಗೆ ಕೂಲಂಕುಷವಾಗಿ ಚರ್ಚಿಸಿದ ವಿಷಯಗಳು ಮತ್ತು ಇದಕ್ಕೆ ಇಲಾಖೆಯ ಅಧಿಕಾರಿಗಳಿಂದ ಉತ್ತರ ಈ ಎಲ್ಲಾ ಅಂಶಗಳನ್ನು ಪರಿಶೀಲಿಸಿದ ಸಮಿತಿಯು ಈ ವಿಚಾರವಾಗಿ ಮುಂದಿನ ಕೋರ್ಟ್ ತೀರ್ಪಿಗೆ ಬದ್ಧರಾಗೋಣವೆಂದು ಹೇಳುತ್ತಾ, ಸದರಿ ನೌಕರರನ್ನು ಅವರ ಕೋರಿಕೆಯಂತೆ, ಕೋರ್ಟ್ ಆದೇಶದಂತೆ ಅವರುಗಳನ್ನು ಮೊದಲು ಯಾವ ರೀತಿ ನೇಮಕ ಮಾಡಿಕೊಳ್ಳಲಾಗಿತ್ತೋ ಅದೇ ರೀತಿಯಲ್ಲಿ ಮುಂದುವರಿಸುವಲ್ಲಿ ಸೂಕ್ತ ವ್ಯವಸ್ಥೆ ಮಾಡಿಕೊಳ್ಳುವಂತೆ ಇಲಾಖಾ ಅಧಿಕಾರಿಗಳಿಗೆ ನಿರ್ದೇಶಿಸಲಾಯಿತು.**

xii. ತುಮಕೂರಿನ ಕೆ.ವಿ. ಮೂಡಲಗಿರಯ್ಯ, ಕೆ.ಸಿ. ಸುರೇಶ್, ಚಂದ್ರಶೇಖರ್ ಹೆಚ್.ಜಿ. ಮತ್ತು ರುದ್ರೇಶ್ .ಬಿ ಸಿ.ಆರ್.ಸಿ.ಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ರಿಟ್ ಅರ್ಜಿಗಳನ್ನು (ರಿಟ್ ಅರ್ಜಿ ಸಂಖ್ಯೆ:11604–11607/2013) ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ:**08.07.2019**ರಂದು ಈ ಕೆಳಗಿನಂತೆ ತೀರ್ಪನ್ನು ನೀಡಿದೆ: (ಅಡಕ 11ನ್ನು **ಅವಗಾಹಿಸುವುದು**).

***9. When the scheme introduced by the Central Government for a particular cause, unless and until the scheme is completed, the State Government cannot delegate the powers of NGOs. to continue the scheme introduced by the***

*Central Government. It is also not in dispute that in identical circumstances, this court in the case of Santhosh Kumar stated supra held that unless and until the scheme permits, it is impermissible for the respondents to create NGOs. for the purpose of handing over the workers for service and maintenance. By virtue of the scheme introduced by the Union Government, these workers are permitted to work under the said Scheme and not under the NGOs. And the petitioners shall work under the scheme as long as the scheme continues. The order passed by this court has reached finality.*

*10. In view of the above, there cannot be any discrimination between the coordinators who are working under the scheme introduced by the Central Government or the State Government in violation of Article 14 and 21 of the Constitution of India.*

*11. For the reasons stated above, the Writ Petitions are disposed off. Impugned orders at Annexures 'H' and 'J' are hereby quashed. The respondents are hereby directed to permit the petitioners to serve as coordinators under the scheme introduced by the Central Government till the completion of the scheme.*

*Ordered accordingly.*

xiii. ಉಡುಪಿ ಜಿಲ್ಲೆಯ ನಾಗೇಶ್, ವಿಶಾಲ್ ಕುಮಾರಿ, ಕೆ.ಆರ್.ವಾಸುದೇವ ಮತ್ತು ಕರುಣ ಸಿ.ಆರ್.ಸಿ.ಗಳು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ರಿಟ್ ಅರ್ಜಿಗಳನ್ನು (ರಿಟ್ ಅರ್ಜಿ ಸಂಖ್ಯೆ: 38748-38751/2014) ದಾಖಲಿಸಿದ್ದು, ಮಾನ್ಯ ಉಚ್ಚ ನ್ಯಾಯಾಲಯವು **ದಿನಾಂಕ:12.07.2019ರಂದು** ಈ ಕೆಳಗಿನಂತೆ ತೀರ್ಪನ್ನು ನೀಡಿದೆ: **(ಅಡಕ 12ನ್ನು ಅವಗಾಹಿಸುವುದು).**

*2. The petitioner and others were appointed strictly on contract basis for a particular tenure. The petitioners' services have been discontinued in view of later policy and that outsourcing in respect of appointment of staffs to implement NRDWP Scheme and it's support activities.*

*3. The petitioners have no right to hold the post as it was a tenure post. The petitioners have not sought for quashing later policy relating to outsourcing in implementation of NRDWP Scheme. Thus, the petitioners are not entitled to reappoint to the post of Block Resource Coordinators (BRC's)/ Cluster Resource Coordinators (CRC's).*

*4. In view of these facts and circumstances, the petitioners have not made out a case so as to interfere with the order dated 20.10.2011 at Annexure-C. Accordingly, writ petitions stand dismissed.*

xiv. ಮೇಲಿನ ಕಂಡಿಕೆ-x ರಲ್ಲಿ ತಿಳಿಸಲಾದ ತೀರ್ಪಿನ ವಿರುದ್ಧ ರಿಟ್ ಅಪೀಲನ್ನು ದಾಖಲಿಸುವ ಸಂಬಂಧ ಮಾನ್ಯ ಅಡ್ವೊಕೇಟ್ ಜನರಲ್‌ರವರಿಂದ **ದಿನಾಂಕ:30-11-2018** ರಂದು ಅನುಮತಿ ಪಡೆದು, **ದಿನಾಂಕ:06-02-2019** ರಂದು ರಿಟ್ ಅಪೀಲನ್ನು (ರಿಟ್ ಅಪೀಲ್ ಸಂ.366/2019) ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ, ಬೆಂಗಳೂರಿನಲ್ಲಿ ದಾಖಲಿಸಿದ್ದು, **ದಿನಾಂಕ:21-08-2019** ರಂದು ಮಾನ್ಯ ಉಚ್ಚ ನ್ಯಾಯಾಲಯವು ಈ ಕೆಳಕಂಡಂತೆ ತೀರ್ಪನ್ನು ನೀಡಿ, ರಿಟ್ ಅಪೀಲನ್ನು ವಜಾಗೊಳಿಸಿದೆ: (ಅಡಕ 13ನ್ನು ಅವಗಾಹಿಸುವುದು).

*8. The appellants did not make out a case before the learned Single Judge that the employment of the respondents was already terminated. The order dated 4th April 2011 issued by the Government of Karnataka shows that the post held by the respondents were intended to be filled in only for a period of one year which period could be extended, if found necessary.*

*9. The appellants have now raised a contention that the employment of the respondents was terminated. Such a factual contention was not raised before the learned Single Judge. The logical consequence of this is that the employment of the respondents continued. All that the learned Single Judge has held is that so long as the employment of the respondents continues, they cannot be forced to work under the NGOs. In fact, that was precisely the second prayer made in the writ petition filed by the respondents.*

*10. The first prayer in the writ petition of the respondents was that the employment of the respondents be continued till the completion of the Scheme. The learned Single Judge has issued a direction that the appointment of the respondents will continue so long as the Scheme continues.*

*11. Though no fault can be found with the view taken by the learned Single Judge that the respondents cannot be forced to work under the NGOs, the direction to continue the employment of the respondents till the conclusion of the Scheme cannot be justified inasmuch as in view of the order dated 4th April 2011, the initial service period of one year of the respondents can be extended only if the concerned authority finds it necessary. Essentially, the appointment of the respondents is temporary in nature. Therefore, to that extent, the direction contained in paragraph 6 of the impugned order will have to be clarified. The respondents cannot claim continuation of the employment as a matter of right till the continuation of the Scheme.*

*12. Hence, we pass the following order:*

i. *Subject to modification made of paragraph 6 of the impugned order as discussed above, no case for interference in the impugned order is made out.*
ii. *The appeal is accordingly dismissed.*
iii. *The pending interlocutory application does not survive for consideration and stands disposed of.*

xv. ಈ ತೀರ್ಪನ್ನು ಪ್ರಶ್ನಿಸಿ, ಮಾನ್ಯ ಭಾರತದ ಸರ್ವೋಚ್ಚ ನ್ಯಾಯಾಲಯದಲ್ಲಿ ವಿಶೇಷ ಅನುಮತಿ ಅರ್ಜಿ ಸಲ್ಲಿಸುವ ಸಂಬಂಧವಾಗಿ ಕಡತವನ್ನು (ಗ್ರಾಅಪ 69 ಗ್ರಾನೀಸ(2) 2015-16) ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರಿಂದ (03.10.2019ರಂದು) ಕಾನೂನು ಇಲಾಖೆಯ ಪ್ರಧಾನ ಕಾರ್ಯದರ್ಶಿಯವರ ಮೂಲಕ (09.10.2019ರಂದು) ಮಾನ್ಯ ಅಡ್ವೋಕೇಟ್ ಜನರಲ್ ರವರ ಅಭಿಪ್ರಾಯಕ್ಕಾಗಿ ಸಲ್ಲಿಸಲಾಗಿದೆ. ಮಾನ್ಯ ಅಡ್ವೋಕೇಟ್ ಜನರಲ್ ರವರ ಅಭಿಪ್ರಾಯವನ್ನು ನಿರೀಕ್ಷಿಸಲಾಗಿದೆ.

xvi. ಕಂಡಿಕೆ-xiiರಲ್ಲಿ ವಿವರಿಸಿದಂತೆ ರಿಟ್ ಅರ್ಜಿ ಸಂಖ್ಯೆ: ರಿಟ್ ಅರ್ಜಿ ಸಂಖ್ಯೆ:11604-11607/2013ರ ಸಂಬಂಧ ದಿನಾಂಕ:08.07.2019ರಂದು ನೀಡಲಾದ ತೀರ್ಪನ್ನು ಪ್ರಶ್ನಿಸಿ ಮೇಲ್ಮನವಿಯನ್ನು ಸಲ್ಲಿಸುವ

ಕುರಿತು HoLC ರವರ ಸಹಮತಿ ಪಡೆದು ಪ್ರಧಾನ ಕಾರ್ಯದರ್ಶಿಗಳ ಅನುಮೋದನೆಯೊಂದಿಗೆ ಅಡ್ವೋಕೇಟ್ ಜನರಲ್ ರವರ ಕಛೇರಿಗೆ ಸಲ್ಲಿಸಲಾಗಿದೆ.

xvii. ಪ್ರಸ್ತುತ ಜಿಲ್ಲೆಗಳಿಂದ ಬಂದ ಮಾಹಿತಿಯ ಪ್ರಕಾರ 10 ಜಿಲ್ಲೆಗಳಲ್ಲಿ 204 ಸಂಯೋಜಕರು (56 ಬಿಆರ್‌ಸಿಗಳು ಹಾಗೂ 148 ಸಿಆರ್‌ಸಿಗಳು) NRDWP ಯೋಜನೆಗಳ ಮಾರ್ಗಸೂಚಿಗಳ ಮೇರೆಗೆ ಹೊರಗುತ್ತಿಗೆ ಸಂಸ್ಥೆಗಳ/NGO ಗಳ ಮೂಲಕ ಕಾರ್ಯನಿರ್ವಹಿಸುತ್ತಿದ್ದಾರೆ. **(ಅಡಕ 14ನ್ನು ಅವಗಾಹಿಸುವುದು)**

2011ರಲ್ಲಿ ಆಯ್ಕೆಯಾದ 712 ಸಂಯೋಜಕರ ಪೈಕಿ ಪ್ರಸ್ತುತ ಒಟ್ಟು 131 ಸಂಯೋಜಕರು (46 ಬಿಆರ್‌ಸಿಗಳು, 85 ಸಿಆರ್‌ಸಿಗಳು) ಹೊರಗುತ್ತಿಗೆ ಸಂಸ್ಥೆಗಳ/NGO ಗಳ ಮೂಲಕ 10 ಜಿಲ್ಲೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಂದರೆ ಈಗಿನ 204 ಸಂಯೋಜಕರ ಪೈಕಿ 131 ಸಂಯೋಜಕರು 2011ರಲ್ಲಿಯೂ ಆಯ್ಕೆಗೊಂಡಿದ್ದರು ಈ ಸಂಯೋಜಕರ ಪೈಕಿ ಚಾಮರಾಜನಗರ ಜಿಲ್ಲಾ ಪಂಚಾಯತಿಯಲ್ಲಿ ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಶ್ರೀ ಬಿ. ಲಿಂಗರಾಜು (ಬಿ.ಆರ್.ಸಿ) ಮತ್ತು ಶ್ರೀ ಎಸ್. ಮಹೇಶ್ (ಸಿ.ಆರ್.ಸಿ) ಇವರು ಮಾನ್ಯ ಕರ್ನಾಟಕ ಉಚ್ಚ ನ್ಯಾಯಾಲಯ ಬೆಂಗಳೂರನಲ್ಲಿ ರಿಟ್ ಅರ್ಜಿ ಸಂಖ್ಯೆ:24079-24080/2012 ದಾಖಲಿಸಿದ್ದು, ಇದರ ತೀರ್ಪನ್ನು ದಿ:20.07.2012 ರಂದು ನೀಡಲಾಗಿದೆ.

xviii. NRDWP ಮಾರ್ಗಸೂಚಿಯ ಪುಟ-81ರ ಪ್ಯಾರ-6ರ ಅನುಗುಣವಾಗಿ (DWSM) 'ಜಿಲ್ಲಾ ನೀರು ಮತ್ತು ನೈರ್ಮಲ್ಯ ಮಿಷನ್‌ವತಿಯಿಂದ, NGOಗಳ ಮೂಲಕ ಅಥವಾ ಹೊರಗುತ್ತಿಗೆಯಲ್ಲಿ ಮಾತ್ರ BRC/CRCಗಳ ಸೇವೆಯನ್ನು ಪಡೆದುಕೊಳ್ಳಲು ಸದರಿ ಮಾರ್ಗಸೂಚಿಯಲ್ಲಿ ಅವಕಾಶ ಕಲ್ಪಿಸಲಾಗಿರುತ್ತದೆ. **(ಅಡಕ 15ನ್ನು ಅವಗಾಹಿಸುವುದು)**

***6. Staffing of BRCs: All functionaries of BRC will be hired by the DWSM through an NGO or an outsourcing agency to provide specific services on contract basis, renewable on a yearly basis, following the process laid down by the SWSM and will be paid a consolidated remuneration. The running of BRCs can also be outsourced by the SWSM to reputed NGOs. To achieve economy of scale, it will be desirable that in a district, all BRCs are managed by a single NGO/out sourcing agency that can be given upto 12% of the total expenditure as service remuneration or overhead (including service tax). The BRC functionaries engaged will have the following educational qualifications, experience, age limit and remuneration:***

***8.2. Cluster Coordinator i.): Carrying out all roles and responsibilities listed out for the Block Coordinator except handling accounting of BRC expenditure.***

xix. ಭಾರತ ಸರ್ಕಾರದ ಮಾನ್ಯ ಜಲಶಕ್ತಿ ಮಂತ್ರಿಯವರು ಕರ್ನಾಟಕದ ಮಾನ್ಯ ಮುಖ್ಯ ಮಂತ್ರಿಗಳಿಗೆ ದಿನಾಂಕ:20-08-2019 ರಂದು ಬರೆದ ಅರೆ ಸರ್ಕಾರಿ ಪತ್ರದಲ್ಲಿ **(ಅಡಕ-16 ಅವಗಾಹಿಸುವುದು)** ದಿನಾಂಕ:15-08-2019 ರಂದು ಮಾನ್ಯ ಪ್ರಧಾನ ಮಂತ್ರಿಯವರು ದೇಶವನ್ನು ಉದ್ದೇಶಿಸಿ ಮಾಡಿದ 73ನೇ ಸ್ವಾತಂತ್ರ್ಯ ದಿನಾಚರಣೆಯ ಭಾಷಣದಲ್ಲಿ 2024ರೊಳಗಾಗಿ ಪ್ರತಿಯೊಂದು ಗ್ರಾಮೀಣ ಕುಟುಂಬಕ್ಕೆ **ಜಲಜೀವನ್ ಮಿಷನ್** ಅಡಿ ಕಾರ್ಯನಿರತ ಕೌಟುಂಬಿಕ ನಳ ಸಂಪರ್ಕವನ್ನು ಕಲ್ಪಿಸುವ ಬಗ್ಗೆ ಘೋಷಿಸಿದ್ದರ ಪ್ರಯುಕ್ತ ಹಾಲಿ ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆಯನ್ನು (NRDWP) ಮರುವಿನ್ಯಾಸಗೊಳಿಸಿ ಜಲಜೀವನ್ ಮಿಷನ್‌ನಲ್ಲಿ ಅಂತರ್ಗತಗೊಳಿಸಲಾಗುವುದೆಂದು ಮತ್ತು ಈ NRDWP ಯೋಜನೆಯ ಅವಧಿಯು 14ನೇ ಹಣಕಾಸು ಆಯೋಗದ ಅವಧಿಯೊಂದಿಗೆ ಅಂದರೆ 2019-20ರವರೆಗೆ ಸಹ ಮುಕ್ತಾಯಗೊಳ್ಳುತ್ತಿದ್ದು NRDWP ಅಡಿಯಲ್ಲಿಯ ಚಟುವಟಿಕೆಗಳು

ಜಲಜೀವನ್ ಮಿಷನ್ ಅಡಿ ಸಮಾಗಮಗೊಳ್ಳುವುದಾಗಿ ಮತ್ತು NRDWP ಅಡಿಯಲ್ಲಿ ಲಭ್ಯವಿರುವ ಅನುದಾನವನ್ನು ಹೊಸ ಜಲಜೀವನ್ ಮಿಷನ್ ಅಡಿಯಲ್ಲಿಯ ಯೋಜನೆಗಳಿಗೆ ಬಳಸಲಾಗುವುದೆಂದು ತಿಳಿಸಿರುತ್ತಾರೆ.

xx. ತದನಂತರ ದಿನಾಂಕ:12.11.2019ರಂದು ನಡೆದ ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯ ಸಭೆಯಲ್ಲಿ ಕೂಲಂಕುಷವಾಗಿ ಚರ್ಚಿಸಿ ಈ ಬಗ್ಗೆ ಸರ್ಕಾರದ ಮುಖ್ಯ ಕಾರ್ಯದರ್ಶಿಗಳ ಸಮಕ್ಷಮದಲ್ಲಿ ಈ ವಿಷಯವನ್ನು ಇತ್ಯರ್ಥಪಡಿಸುವ ಕುರಿತು ನಿರ್ಣಯಿಸಲಾಗಿದ್ದು, ಸದರಿ ನಿರ್ಣಯದ ಪೂರ್ಣ ನಡವಳಿಗಳನ್ನು ನಿರೀಕ್ಷಿಸಲಾಗಿದೆ.

BRC/CRC ಗಳ ಕುರಿತ ವಸ್ತುಸ್ಥಿತಿಯ ಮಾಹಿತಿಯನ್ನು ತಮ್ಮ ಅವಗಾಹನೆಗೆ ಹಾಗೂ ಸೂಕ್ತ ಆದೇಶಕ್ಕೆ ಸಲ್ಲಿಸಿದೆ.

07/12/2019
IEC/HRD Consultant
(WSSO)

32) <u>ಸರ್ಕಾರದ ಉಪ ಕಾರ್ಯದರ್ಶಿಗಳು(ಆಡಳಿತ)</u> ]

**ಕಂಡಿಕೆ 31 ರ ಉಪಕಂಡಿಕೆಗಳಲ್ಲಿನ ಅಂಶಗಳನ್ನು ಕುರಿತಂತೆ ಈ ಕೆಳಕಂಡಂತೆ ಟಿಪ್ಪಣಿಸಲಾಗಿದೆ:**

1) ಕಂಡಿಕೆ 31(iv) ಅಡಿಯಲ್ಲಿ ವಿವರಿಸಿದಂತೆ, ಬಿ.ಆರ್.ಸಿ. ಮತ್ತು ಸಿ.ಆರ್.ಸಿ. ಗಳು ದಾಖಲಿಸಿದ ರಿಟ್ ಅರ್ಜಿಗಳ ಸಂಬಂಧ ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯ, ಬೆಂಗಳೂರು ದಿನಾಂಕ 20-07-2012 ರಂದು ನೀಡಿದ ತೀರ್ಪಿನ ಪ್ಯಾರಾ 4 ಮತ್ತು 5 ರಲ್ಲಿನ ಅಂಶಗಳನ್ನು ಪರಿಶೀಲಿಸಲಾಗಿ, ರಿಟ್ ಅರ್ಜಿದಾರರ ಪೈಕಿ ಕೇವಲ ಚಾಮರಾಜನಗರ ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಶ್ರೀ ಬಿ. ಲಿಂಗರಾಜು (ಬಿ.ಆರ್.ಸಿ.) ಮತ್ತು ಶ್ರೀ ಎಸ್. ಮಹೇಶ್ (ಸಿ.ಆರ್.ಸಿ.) ಇವರುಗಳ ಸೇವೆಯನ್ನು ರಿಟ್ ಅರ್ಜಿಗಳಲ್ಲಿ ಪ್ರತಿವಾದಿ ನಂ.2 ಆದ ಚಾಮರಾಜನಗರ ಜಿಲ್ಲಾ ಪಂಚಾಯತಿಯು ಮುಂದುವರೆಸಿದ್ದು, ಇವರು ಇಲ್ಲಿಯವರೆಗೂ ಅದೇ ಹುದ್ದೆಗಳಲ್ಲಿ ಎನ್.ಆರ್.ಡಿ.ಡಬ್ಲ್ಯುಪಿ. ಮಾರ್ಗಸೂಚಿಗಳ ಪ್ರಕಾರ ಎನ್.ಜಿ.ಓ. ವತಿಯಿಂದ ಹೊರಗುತ್ತಿಗೆ ಆಧಾರದ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ. ಉಳಿದ ಯಾವುದೇ ರಿಟ್ ಅರ್ಜಿದಾರರ ಸೇವೆಯನ್ನು ಸಂಬಂಧಿಸಿದ ಜಿಲ್ಲಾ ಪಂಚಾಯತಿಗಳು (ಬೆಂಗಳೂರು ನಗರ ಮತ್ತು ತುಮಕೂರು) 30-04-2012 ರಂದು ಮುಕ್ತಾಯಗೊಳಿಸಿದ ನಂತರ ಪುನ: ಅವರ ಸೇವೆಯನ್ನು ಪಡೆದಿರುವುದಿಲ್ಲ.

2) ಕಂಡಿಕೆ 31(xviii) ಅಡಿಯಲ್ಲಿ ಉಲ್ಲೇಖಿಸಿದ ಎನ್.ಆರ್.ಡಿ.ಡಬ್ಲ್ಯುಪಿ. ಯೋಜನೆಯ ಮಾರ್ಗಸೂಚಿಗಳ ಹಿನ್ನೆಲೆಯಲ್ಲಿ, ಕಂಡಿಕೆ 31(ix) ರಲ್ಲಿ ಉಲ್ಲೇಖಿಸಲಾದ ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯ, ಬೆಂಗಳೂರು ಇದರ ದಿನಾಂಕ 01-10-2018 ರ ತೀರ್ಪಿನ ಪ್ಯಾರಾ 5 ಮತ್ತು 6 ರಲ್ಲಿ ಮಾನ್ಯ ಉಚ್ಚನ್ಯಾಯಾಲಯವು ಎನ್.ಜಿ.ಓ. ಗಳನ್ನು 1ನೇ ಪ್ರತಿವಾದಿ, ಕರ್ನಾಟಕ ಸರ್ಕಾರದ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಪ್ರಧಾನ ಕಾರ್ಯದರ್ಶಿಯವರು ಸೃಜಿಸಿರುತ್ತಾರೆ ಎಂಬ ಹಾಗೂ ಎನ್.ಆರ್.ಡಿ.ಡಬ್ಲ್ಯುಪಿ. ಯೋಜನೆಯು ಅನುಮತಿಸದ ಹೊರತು ರಿಟ್ ಅರ್ಜಿದಾರರನ್ನು ಎನ್.ಜಿ.ಓ. ಗಳ ಅಡಿ ಕಾರ್ಯನಿರ್ವಹಿಸುವಂತೆ ನಿರ್ದೇಶಿಸಿರುವುದನ್ನು ಒಪ್ಪಲಾಗದೆಂಬ ಅರ್ಥೈಕೆಯ ತೀರ್ಪನ್ನು ಪ್ರಶ್ನಿಸಿ, ಮಾನ್ಯ ಅಡ್ವೊಕೇಟ್ ಜನರಲ್‌ರವರ ಅಭಿಪ್ರಾಯದ ಮೇರೆಗೆ ರಿಟ್ ಅಪೀಲ್ (ನಂ.366/2019) ದಾಖಲಿಸಲಾಗಿದ್ದು, ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯವು ದಿನಾಂಕ:21-08-2019 ರಂದು ನೀಡಿದ ತೀರ್ಪಿನ ಪ್ರಮುಖಾಂಶಗಳನ್ನು ಕಂಡಿಕೆ 31(xiv) ರಲ್ಲಿ ಉಲ್ಲೇಖಿಸಲಾಗಿದೆ.

3) ದಿನಾಂಕ 21-08-2019 ರ ತೀರ್ಪಿನ ಪ್ಯಾರಾ 11 ರಲ್ಲಿ "..... Essentially the appointment of Respondents is temporary in nature. Therefore, to that extent the direction contained in paragraph 6 of the impugned order will have to be clarified......" ಮುಂದುವರೆಯುತ್ತಾ, ಸದರಿ ತೀರ್ಪಿನ ಪ್ಯಾರಾ 12 ರಲ್ಲಿ "..... Hence, we pass the following order....

(i) Subject to modification made of paragraph 6 of the impugned order as discussed above, no case for interference in the impugned order is made out....." ಎಂಬುದಾಗಿ ಆದೇಶಿಸಿ ರಿಟ್ ಅಪೀಲನ್ನು ವಜಾಗೊಳಿಸಲಾಗಿದೆ.

4) ಈ ಮಧ್ಯೆ, ಕಂಡಿಕೆ 31(xii) ರಲ್ಲಿ ವಿವರಿಸಲಾದಂತೆ, ತುಮಕೂರು ಜಿಲ್ಲಾ ಪಂಚಾಯತ್ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಿ.ಆರ್.ಸಿ. ಗಳು ಹೂಡಿದ ರಿಟ್ ಅರ್ಜಿಗಳ ಸಂಬಂಧ ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯ, ಬೆಂಗಳೂರು ದಿನಾಂಕ 08-07-2019 ರಂದು ನೀಡಿದ ತೀರ್ಪಿನ ಪ್ಯಾರಾ 8 ರಲ್ಲಿ ಕೇಂದ್ರ ಸರ್ಕಾರವು ಪ್ರಾರಂಭಿಸಿದ ಯೋಜನೆಯಡಿ, ಯೋಜನೆಯು ಅಸ್ತಿತ್ವದಲ್ಲಿರುವಾಗ ರಾಜ್ಯ ಸರ್ಕಾರವು ಎನ್.ಜಿ.ಓ. ಗಳಿಗೆ ಅಧಿಕಾರವನ್ನು ಪ್ರತ್ಯಾಯೋಜಿಸುವಂತಿಲ್ಲ ("...... when the scheme is still existing, the State Government cannot delegate the powers to the NGOs under the Scheme introduced by the Central Government......") ಎಂಬುದಾಗಿ ಅರ್ಥೈಸುತ್ತಾ, ಕೇಂದ್ರ ಸರ್ಕಾರವು ಪ್ರಾರಂಭಿಸಿದ ಯೋಜನೆಯಡಿ ರಿಟ್ ಅರ್ಜಿದಾರರನ್ನು ಸಂಯೋಜಕರನ್ನಾಗಿ ಯೋಜನೆಯು ಮುಕ್ತಾಯಗೊಳ್ಳುವವರೆಗೂ ಕಾರ್ಯನಿರ್ವಹಿಸಲು ಪ್ರತಿವಾದಿಗಳು ಅನುಮತಿಸಬೇಕೆಂದು ನಿರ್ದೇಶಿಸಿದೆ. ಸದರಿ ತೀರ್ಪನ್ನು ಪ್ರಶ್ನಿಸಿ, ರಿಟ್ ಅಪೀಲ್ ಸಲ್ಲಿಸುವ ಕುರಿತ ಕ್ರಮ ಪ್ರಕ್ರಿಯೆಯಲ್ಲಿದೆ.

5) ಕಂಡಿಕೆ 31(xiii) ರಲ್ಲಿ ವಿವರಿಸಿದಂತೆ, ಉಡುಪಿ ಜಿಲ್ಲಾ ಪಂಚಾಯತಿ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಸಿ.ಆರ್.ಸಿ. ಗಳು ಮಾನ್ಯ ಕರ್ನಾಟಕ ಉಚ್ಚನ್ಯಾಯಾಲಯದಲ್ಲಿ ಹೂಡಲಾದ ರಿಟ್ ಅರ್ಜಿಗಳ ಸಂಬಂಧ ಮಾನ್ಯ ನ್ಯಾಯಾಲಯವು 12-07-2019 ರಂದು ನೀಡಿದ ತೀರ್ಪಿನಲ್ಲಿ ಈ ಕೆಳಕಂಡಂತೆ ಆದೇಶಿಸಿ ರಿಟ್ ಅರ್ಜಿಗಳನ್ನು ವಜಾಗೊಳಿಸಿದೆ:

The Petitioners have no right to hold the post as it was a tenure post. The Petitioners have not sought for quashing later policy relating to outsourcing in implementation of NRDWP Scheme. Thus, the Petitioners are not entitled to reappoint to the post of Block Resource Coordinators (BRCs) / Cluster Resource Coordinator (CRCs). Accordingly, writ petitions stand dismissed.

6) ಕಂಡಿಕೆ 31(xix) ರಲ್ಲಿ ವಿವರಿಸಿದಂತೆ 15-08-2019 ರಂದು ಕೇಂದ್ರ ಸರ್ಕಾರವು ನೂತನವಾಗಿ ಸೃಜಿತಗೊಂಡ ಜಲಶಕ್ತಿ ಮಂತ್ರಾಲಯದ ವತಿಯಿಂದ ಜಲಜೀವನ್ ಮಿಷನ್ ಎಂಬ ನೂತನ ಯೋಜನೆಯನ್ನು ಘೋಷಿಸಿದ್ದು, ಎನ್.ಆರ್.ಡಿ.ಡಬ್ಲ್ಯುಪಿ. ಯೋಜನೆಯು 14ನೇ ಹಣಕಾಸು ಆಯೋಗದ ಅವಧಿಯೊಂದಿಗೆ ಅಂದರೆ 2019-20 ರವರೆಗೆ ಮುಕ್ತಾಯಗೊಂಡು ಹೊಸ ಯೋಜನೆಯಲ್ಲಿ ಸಮಾಗಮಗೊಳ್ಳುವುದಾಗಿಯೂ ಮತ್ತು ಎನ್.ಆರ್.ಡಿ.ಡಬ್ಲ್ಯುಪಿ. ಯೋಜನೆಯಡಿ ಲಭ್ಯವಿರುವ ಅನುದಾನವನ್ನು ನೂತನ ಯೋಜನೆಯ ಕಾರ್ಯಕ್ರಮಗಳಿಗೆ ಬಳಸಲಾಗುವುದೆಂಬ ಅಂಶವನ್ನು ಜಲಶಕ್ತಿ ಮಂತ್ರಾಲಯದ ಮಾನ್ಯ ಸಚಿವರು ಸ್ಪಷ್ಟಪಡಿಸಿರುತ್ತಾರೆ.

7) ಕಂಡಿಕೆ 30(xvii) ರಲ್ಲಿ ತಿಳಿಸಿದಂತೆ, ದಿನಾಂಕ ಏಪ್ರಿಲ್-2011 ರಲ್ಲಿ 712 ಸಂಯೋಜಕರು 25 ಜಿಲ್ಲಾ ಪಂಚಾಯತಿಗಳಲ್ಲಿ ಆಯ್ಕೆಗೊಂಡು, ಕಾರ್ಯನಿರ್ವಹಿಸಿ, ದಿನಾಂಕ 30-04-2012 ರಂದು ಅವರ ಸೇವೆ ಮುಕ್ತಾಯಗೊಳಿಸಲಾಗಿದ್ದು, ಈ ಪೈಕಿ ಹಾಲಿ 131 ಸಂಯೋಜಕರು ಮಾತ್ರ 10 ಜಿಲ್ಲಾ ಪಂಚಾಯತಿಗಳಲ್ಲಿ ಎನ್.ಜಿ.ಓ. ಮುಖಾಂತರ ಹೊರಗುತ್ತಿಗೆ ಆಧಾರದ ಮೇಲೆ ಎನ್.ಆರ್.ಡಿ.ಡಬ್ಲ್ಯುಪಿ. ಯೋಜನೆಯ ಮಾರ್ಗಸೂಚಿಯನ್ವಯ ಕಾರ್ಯನಿರ್ವಹಿಸುತ್ತಿದ್ದಾರೆ.

8) ಕಂಡಿಕೆ 30(xv) ರಲ್ಲಿ ಕಾಣಿಸಿದಂತೆ, ಮಾನ್ಯ ಕರ್ನಾಟಕ ಉಚ್ಛನ್ಯಾಯಾಲಯವು ರಿಟ್ ಅಪೀಲ್ 366/2019 ರಲ್ಲಿ ನೀಡಿದ ತೀರ್ಪನ್ನು ಪ್ರಶ್ನಿಸಿ ಭಾರತದ ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ವಿಶೇಷ ಅನುಮತಿ ಅರ್ಜಿಯನ್ನು ದಾಖಲಿಸುವ ಬಗ್ಗೆ ಈಗಾಗಲೇ ಕಡತವನ್ನು ಮಾನ್ಯ ಅಡ್ವೋಕೇಟ್ ಜನರಲ್‌ರವರ ಕಛೇರಿಗೆ ಸಲ್ಲಿಸಲಾಗಿದೆ.

9) ಕಂಡಿಕೆ 30(xx) ರಲ್ಲಿ ಪ್ರಸ್ತಾಪಿಸಿದಂತೆ, ಮಾನ್ಯ ಕರ್ನಾಟಕ ವಿಧಾನ ಪರಿಷತ್ತಿನ ಅರ್ಜಿಗಳ ಸಮಿತಿಯು ತನ್ನ ಮುಂದಿನ ಸಭೆಯಲ್ಲಿ ಬಿ.ಆರ್.ಸಿ. / ಸಿ.ಆರ್.ಸಿ. ಗಳ ಸೇವೆಯನ್ನು ಮುಂದುವರೆಸುವ ಬಗ್ಗೆ ಮಾನ್ಯ ಮುಖ್ಯ ಕಾರ್ಯದರ್ಶಿಯವರ ಉಪಸ್ಥಿತಿಯಲ್ಲಿ ಚರ್ಚಿಸಿ ತೀರ್ಮಾನ ತೆಗೆದುಕೊಳ್ಳಲಾಗುವುದೆಂಬ ನಿರ್ಧಾರದ ಪ್ರಕಾರ ಮಾನ್ಯ ಮುಖ್ಯ ಕಾರ್ಯದರ್ಶಿಯವರಿಗೆ ವಿಷಯದ ಬಗ್ಗೆ ಮೌಖಿಕ ವಿವರಣೆಯನ್ನು ದಿನಾಂಕ 29-11-2019 ರಂದು ನೀಡಲಾಗಿದೆ.

ಮೇಲೆ ಪ್ರಸ್ತಾಪಿಸಲಾದ ಮಾನ್ಯ ಕರ್ನಾಟಕ ಉಚ್ಛನ್ಯಾಯಾಲಯ, ಬೆಂಗಳೂರು ಇದರ ತೀರ್ಪುಗಳ ಸ್ಪಷ್ಟತೆ ಕುರಿತು ಮತ್ತು ಬಿ.ಆರ್.ಸಿ. / ಸಿ.ಆರ್.ಸಿ. ಗಳ ಸೇವೆಯನ್ನು ಮುಂದುವರೆಸುವ / ಮುಕ್ತಾಯಗೊಳಿಸುವ ಸ್ಥಿತಿಗತಿಗಳ ಬಗ್ಗೆ ಸ್ಪಷ್ಟನೆಯನ್ನು ಇಲಾಖೆಯ ಕಾನೂನು ಕೋಶದಿಂದ ಪಡೆಯುವ ಕುರಿತು ಅನುಮೋದನೆಗಾಗಿ ಕಡತವನ್ನು ಸಲ್ಲಿಸಿದೆ.

T A L

/12

33) ಉಪ ಕಾರ್ಯದರ್ಶಿ

ಕಂಡಿಕೆ 32 'A' ರಂತೆ ಕ್ರಮವಹಿಸಲು ಕೋರಿದೆ.

09/12/19

ಪ್ರಧಾನ ಕಾರ್ಯದರ್ಶಿಗಳು, ಗ್ರಾಅಪ

ಮುಖ್ಯಸ್ಥರು, ಕಾನೂನು ಕೋಶ

9-12-19

ಎಲ್.ಕೆ. ಅತೀಕ್ ...
ಸರ್ಕಾರದ ಪ್ರಧಾನ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

Pr. Secy./RDPR No. 6274 Dt. 10/12/19

10-12-19

36) ಕಡತವನ್ನು ಪರಿಶೀಲಿಸಲಾಯಿತು. ಕಂಡಿಕೆ 33 ಕ್ಕೆ ಸಂಬಂಧಪಟ್ಟಂತೆ, ರಿಟ್ ಅಪೀಲ್ ಸಂಖ್ಯೆ: 366/2019ಕ್ಕೆ ಸಂಬಂಧಿಸಿದಂತೆ ಸರ್ಕಾರಿ ವಕೀಲರ ಅಭಿಪ್ರಾಯದೊಂದಿಗೆ, ಸರ್ಕಾರಿ ವಾಜ್ಯ ನಿರ್ವಹಣ ನಿಯಮಗಳು, 1985 ರ ಭಾಗ II, ಅಧ್ಯಾಯ II, ನಿಯಮ 5 (1) (2) ಮತ್ತು (3) ರ ಪ್ರಕಾರ ಮತ್ತು

ಸರ್ಕಾರದ ಆದೇಶ ಸಂ: ಸಿಆಸುಇ 425 ಎಸ್‌ಜಿಓ 95, ದಿ: 01.01.1996 ರ

Annexure-II (6)

*"**6.Securing copies of judgment from the Law Officer** and forwarding the same to the Law Departments with the recommendation as to whether an appeal should be filed or otherwise. The division to prefer an appeal or not to prefer and appeal will continue to be taken by the Law Department."*

(decision)

ರನ್ವಯ ಕಡತವನ್ನು ಮರುಮಂಡಿಸುವಂತೆ ಕೋರಿದೆ.

(ರಾಜೇಶ್ ಕುಮಾರ್ ಕೆ)
ಕಾನೂನು ಕೋಶದ ಮುಖ್ಯಸ್ಥರು ಹಾಗು
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್
ಇಲಾಖೆ.

No. 6474 Dt. 11.12.19

37) ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ.

DS(Law)

38) WA No. 366/2019 ರಲ್ಲಿ ಸರ್ಕಾರದ ಪರ ವಕಾಲತ್ತು ವಹಿಸಿದ ಪ್ರಧಾನ ಸರ್ಕಾರಿ ವಕೀಲರು (Principal Govt Advocate) ದಿನಾಂಕ 19/12/2019 ರಂದು ಸ್ವಷ್ಟ ಅಭಿಪ್ರಾಯವನ್ನು ನೀಡಿದ್ದು ಕರ್ನಾಟಕ ಉಚ್ಚ ನ್ಯಾಯಾಲಯವು ದಿನಾಂಕ 21.08.2019 ರಂದು ನೀಡಿದ ಆದೇಶದ (Augi

257

6. A perusal of the order and the guidelines would make it apparent that there are errors apparent on the face of the record as far as judgment of the learned Single and that of the Hon'ble Division Bench of the High Court, for the simple reason that the writ petitioners were appointed as CRC and that they were not directly appointed by the State Government, but were working for NGO who in turn were engaged by the said Z.P

7. When such being the case, the Hon'ble Court committed an error by placing employees of a non governmental organization on par with the employees of the State who were appointed after following due process i.e. by issuing advertisement to fill up the post etc. The judgment of the Hon'ble High Court, both in Writ Petition as well Writ Appeal are contrary to the law laid down by the Hon'ble Supreme Court. Hence, in my humble opinion the orders passed by the learned Single Judge in W.P. 58147-58148/2013 and the orders passed by the Hon'ble Division Bench in W. A. No.366/2019, should be appealed before the Hon'ble Supreme Court of India .

Certified copy of the order is enclosed herewith.

Yours faithfully,

**( Y.H. VIJAYKUMAR)**
PRINCIPAL GOVERNMENT ADVOCATE

Copy to:

1. The Principal Secretary, Panchayat Raj and Rural Development, M.S. Building, Bengaluru
2. The Director, Rural Water Supply and Sanitation Mission, no.365, 3rd Floor, M.S. Building, Bengaluru

**YHV//HHR/OPn.18.12**

ಪ್ರಧಾನ ಕಾರ್ಯದರ್ಶಿ(ಪಂಚಾಯತ್‌ರಾಜ್):- ಗ್ರಾಮ ಪಂಚಾಯಿತಿ ನೌಕರರ working conditions ಇನ್ನೂ draft stage ನಲ್ಲಿದೆ. ಈಗಾಗಲೇ ಅದನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಗೆ ಕಳುಹಿಸಿಕೊಡಲಾಗಿದೆ. ಅವರು ಕೆಲವು queries ಹಾಕಿದ್ದಾರೆ. ಅದಕ್ಕೆ ನಾವು ಉತ್ತರ ಕೊಡುತ್ತಿದ್ದೇವೆ, ಅದು ನೋಟಿಫೈ ಆದ ಕೂಡಲೇ ಇದನ್ನೆಲ್ಲಾ sort out ಮಾಡುತ್ತೇವೆ.

(ಸದರಿ ಅರ್ಜಿಯನ್ನು ಬಾಕಿ ಇಡಲು ಸಮಿತಿ ತೀರ್ಮಾನಿಸಿತು)

**ಅರ್ಜಿ ಸಂಖ್ಯೆ: 59/2018**

**ವಿಷಯ:-** ಭಾರತ ಸರ್ಕಾರದ ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆಯಡಿಯಲ್ಲಿ ಬಿಆರ್‌ಸಿ/ಸಿಆರ್‌ಸಿಗಳನ್ನು ನೇಮಕಾತಿ ಮಾಡಿಕೊಂಡು ದಿನಾಂಕ 23.04.2012ರಂದು ಸೇವೆಯಿಂದ ಮುಕ್ತಗೊಳಿಸಿರುವ ಕುರಿತು.

**ಪ್ರಧಾನ ಕಾರ್ಯದರ್ಶಿ (ಗ್ರಾ.ಕು.ನೀ & ನೈರ್ಮಲ್ಯ ಇಲಾಖೆ):-** ಈ ವಿಚಾರಕ್ಕೆ ನಮ್ಮ ಮುಖ್ಯ ಇಂಜಿನಿಯರ್ ಉತ್ತರ ಕೊಡುತ್ತಾರೆ.

**ಅಧ್ಯಕ್ಷರು:-** ಮುಖ್ಯ ಇಂಜಿನಿಯರ್‌ರವರೇ, ಹಿಂದಿನ ಸಭೆಯಲ್ಲಿ ಇದರ ಬಗ್ಗೆ ಏನು ನಿರ್ಣಯ ಮಾಡಲಾಗಿತ್ತು ಎಂದು ನಿಮಗೆ ಗೊತ್ತಿದೆಯೇ?

**ಮುಖ್ಯ ಇಂಜನಿಯರ್ (ಗ್ರಾ.ಕು.ನೀ & ನೈರ್ಮಲ್ಯ ಇಲಾಖೆ):-** ಈ ವಿಷಯದ ಸಂಬಂಧ ಉಪ ಕಾರ್ಯದರ್ಶಿಯವರು ನೋಡಿಕೊಳ್ಳುತ್ತಿದ್ದಾರೆ, ಅವರು ಉತ್ತರ ಕೊಡುತ್ತಾರೆ.

**ಉಪ ಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ & ನೈರ್ಮಲ್ಯ ಇಲಾಖೆ:-** ನಾನು ಆಯುಕ್ತರನ್ನು ಪ್ರತಿನಿಧಿಸುತ್ತಿದ್ದೇನೆ.

**ಅಧ್ಯಕ್ಷರು:-** ಉಪ ಕಾರ್ಯದರ್ಶಿಯವರೇ, ಈ ವಿಷಯಕ್ಕೆ ಸಂಬಂಧಪಟ್ಟಂತೆ, ಈ ಹಿಂದಿನ ಸಭೆಯಲ್ಲಿ ಏನು ನಿರ್ಣಯ ಆಗಿತ್ತು ಎಂದು ನಿಮಗೆ ಗೊತ್ತಿದೆಯೇ?

**ಉಪ ಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ & ನೈರ್ಮಲ್ಯ ಇಲಾಖೆ:-** ಹೌದು. ದಿನಾಂಕ 18.01.2019ಕ್ಕೆ ಮಾನ್ಯ ಸಮಿತಿ ಸದಸ್ಯರು ಒಂದು ನಿರ್ಣಯ ಕೈಗೊಂಡಿದ್ದರು.

ಅಧ್ಯಕ್ಷರು:- ಉಪ ಕಾರ್ಯದರ್ಶಿಯವರೇ, ಅದು implement ಆಗಿದೆಯೇ? ಅದೇ ಉತ್ತರ ನಮಗೆ ಬೇಕಾಗಿರುವುದು.

ಉಪ ಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ & ನೈರ್ಮಲ್ಯ ಇಲಾಖೆ:- ದಿನಾಂಕ 18.01.2019ಕ್ಕೆ ತಮ್ಮ ಸಮಿತಿ ನಿರ್ಣಯ ಏನಿತ್ತು ಎಂದರೆ,

> *"ಈ ಅರ್ಜಿಗೆ ಸಂಬಂಧಪಟ್ಟಂತೆ, ಅರ್ಜಿದಾರರ ಮನವಿ, ಕೋರ್ಟ್‌ನ ಆದೇಶದ ವಿಚಾರದಲ್ಲಿ ಹಿಂದಿನ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಸಚಿವರು ಕೊಟ್ಟಿದ್ದಂತಹ ಅಭಿಪ್ರಾಯ ಮತ್ತು ಮಾನ್ಯ ಸದಸ್ಯರುಗಳು ಕೊಟ್ಟಿರತಕ್ಕಂಥ ಅಭಿಪ್ರಾಯವನ್ನು ಕೂಲಂಕಷವಾಗಿ ಚರ್ಚಿಸಿದ ಬಳಿಕ ಸದರಿ ನೌರರುಗಳನ್ನು ಅವರ ಕೋರಿಕೆಯಂತೆ, ಕೋರ್ಟ್‌ನ ಆದೇಶದಂತೆ, ಅವರನ್ನು ಮೊದಲು ಯಾವ ರೀತಿಯಲ್ಲಿ ನೇಮಕ ಮಾಡಿಕೊಳ್ಳಲಾಗಿತ್ತು, ಅದೇ ರೀತಿಯಲ್ಲಿ ಮುಂದುವರೆಸುವಂತೆ ಸೂಕ್ತ ವ್ಯವಸ್ಥೆ ಮಾಡಿಕೊಳ್ಳಲು ಇಲಾಖಾಧಿಕಾರಿಗಳಿಗೆ ನಿರ್ದೇಶಿಸಲಾಗಿತ್ತು."*

ನಮ್ಮಲ್ಲಿ ಈಗ 204 ಬಿ.ಆರ್.ಸಿ/ಸಿ.ಆರ್.ಸಿ.,ಗಳು ಕೆಲಸ ಮಾಡುತ್ತಿದ್ದಾರೆ. ಮೊದಲ ಬಾರಿಗೆ ದಿನಾಂಕ 04.04.2011ಕ್ಕೆ ಜಾಹಿರಾತಿನ ಮೂಲಕ ಅವರು ಸರ್ಕಾರದ ಅಧಿಕಾರಿಗಳ ಕೈಕೆಳಗೆ ಕೆಲಸ ಮಾಡಬೇಕೆಂದು ನೇಮಕ ಮಾಡಿಕೊಳ್ಳಲಾಗಿತ್ತು. ಈಗ ಒಟ್ಟು 131 ಜನ ಇದ್ದಾರೆ. ಅದರಲ್ಲಿ 46 ಬಿ.ಆರ್.ಸಿ.,ಗಳು ಮತ್ತು 85 ಸಿ.ಆರ್.ಸಿ.,ಗಳು ಕೆಲಸ ಮಾಡುತ್ತಿದ್ದಾರೆ. ಒಂದು ವರ್ಷ ಆದ ನಂತರ ಅವರನ್ನು ತೆಗೆದುಹಾಕಲಾಯಿತು. NRDWP (National Rural Drinking Water Programme) ಯೋಜನೆ ಅಡಿಯಲ್ಲಿ ಅವರು ಗುತ್ತಿಗೆ ನೌಕರರಾಗಿ ಕೆಲಸ ನಿರ್ವಹಿಸಲು ಒಂದು ವರ್ಷದ ಅವಧಿ ಮಾತ್ರ ಇತ್ತು. ಬಿಆರ್‌ಸಿ/ಸಿಆರ್‌ಸಿಗಳ ಗುತ್ತಿಗೆ ಅವಧಿ ಒಂದು ವರ್ಷ ಇದ್ದ ಕಾರಣಕ್ಕಾಗಿ, ದಿನಾಂಕ 23.04.2012ಕ್ಕೆ ಒಂದು ಆದೇಶ ಕೊಟ್ಟು, ದಿನಾಂಕ 30.04.2012ಕ್ಕೆ ಅವರನ್ನು ಕೆಲಸದಿಂದ ತೆಗೆಯಲಾಯಿತು. ನಂತರ ಅವರು ಆ ಆದೇಶದ ವಿರುದ್ಧ ಹೈಕೋರ್ಟ್‌ಗೆ ಹೋಗಿ, ಆದೇಶ ತೆಗೆದುಕೊಂಡು ಬಂದರು. ಆ ಆದೇಶದಲ್ಲಿ ಯಾರ ಸೇವೆ ಅವಶ್ಯಕತೆ ಇದೆಯೋ ಅವರನ್ನು ಮುಂದುವರೆಸಿ ಎಂದು ಹೇಳಿತ್ತು. By that time, it became infructuous. ನಂತರ ಏನಾಯಿತು ಎಂದರೆ, ಅಲ್ಲಿಗೆ ಹೋದ writ petition ಸಲ್ಲಿಸಿದವರು ಯಾರು ಕೂಡ ವಾಪಸ್ಸು ಬರಲಿಲ್ಲ. ಆದರೆ ಚಾಮರಾಜನಗರ ಜಿಲ್ಲೆಯಲ್ಲಿ ಇಬ್ಬರನ್ನು ಮುಂದುವರೆಸಲಾಗಿದೆ. ಅದಾದ ನಂತರ, 2012ರಲ್ಲಿ ಇಬ್ಬರು ಸಿಆರ್‌ಸಿ.,ಗಳು ಮತ್ತೆ ಹೈಕೋರ್ಟ್‌ಗೆ ಹೋದರು. ದಿನಾಂಕ 01.10.2018ರಂದು ಹೈಕೋರ್ಟ್ ಏನು ನಿರ್ಣಯ ಕೊಟ್ಟಿತ್ತು ಎಂದರೆ, ಈ ಸ್ಕೀಂ ಇರುವವರೆಗೂ ಅವರನ್ನು ಮುಂದುವರೆಸಬೇಕು. ಆದರೆ ಕೋರ್ಟ್‌ನವರು ಆ ಸಮಯದಲ್ಲಿ ತಪ್ಪು ಅರ್ಥ ಮಾಡಿಕೊಂಡರು. ನಂತರ ನಾವು ಅದನ್ನು ಅಪೀಲ್ ಮಾಡಿದೆವು. ರಾಜ್ಯ ಸರ್ಕಾರ

254

ಎನ್.ಜಿ.ಓ.,ಗಳನ್ನು ಕ್ರಿಯೇಟ್ ಮಾಡಿದ್ದು ಎಂದು ಅರ್ಥ ಮಾಡಿಕೊಂಡು, ಅವರಿಗೆ ಎನ್.ಜಿ.ಓ.,ಗಳನ್ನು ಕ್ರಿಯೇಟ್ ಮಾಡುವುದಕ್ಕೆ ಅಧಿಕಾರವಿಲ್ಲ. Scheme permit ಮಾಡದ ಹೊರತು, first respondent ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್, ಕರ್ನಾಟಕ ಸರ್ಕಾರಕ್ಕೆ ಅಧಿಕಾರ ಇಲ್ಲ ಎಂದು ಕ್ಲಿಯರ್ ಆಗಿ ಹೇಳಿದ್ದರು. ಆದರೆ, NRDWP ಸ್ಕೀಂನಲ್ಲಿ ಕ್ಲಿಯರ್ ಆಗಿ ಬಿ.ಆರ್.ಸಿ/ಸಿ.ಆರ್.ಸಿ.,ಗಳನ್ನು ಎನ್.ಜಿ.ಓ., ಮುಖಾಂತರವೇ ತೆಗೆದುಕೊಳ್ಳಬೇಕು, outsourcing ಮುಖಾಂತರವೇ ತೆಗೆದುಕೊಳ್ಳಬೇಕು ಮಾಡಿದ್ದಾರೆಯೇ ಹೊರತು, ಅವರನ್ನು ಕರ್ನಾಟಕ ಸರ್ಕಾರದಿಂದ ನೇಮಕ ಮಾಡಿಕೊಂಡಿಲ್ಲ. After that we took Accountant General opinion. ನಾವು ರಿಟ್ ಅಪೀಲ್ ಅನ್ನು ಸಲ್ಲಿಸಿದ್ದು, ಈ ಸಂಬಂಧವಾಗಿ ಆದೇಶವಾಗಿದೆ. ಅದನ್ನು ಸಮಿತಿಯ ಗಮನಕ್ಕೆ ತಂದಿದ್ದೇವೆ.

(ಮುಂದು...)

253

(23)



ದಿನಾಂಕ: 12.11.2019/12.30/ಎಂ.ಎಂ–ಎ.ಕೆ/ಅರ್ಜಿಗಳ ಸಮಿತಿ 3

ಅರ್ಜಿ ಸಂಖ್ಯೆ: 59/2018 (ಮುಂದು)

ಉಪಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ&ನೈ.ಇಲಾಖೆ (ಮುಂದು):– ಅದರ ಆದೇಶ ಕೂಡ ಬಂದಿದೆ. ಅದನ್ನು ತಮ್ಮ ಗಮನಕ್ಕೆ ತಂದಿದ್ದೇವೆ.

ಶ್ರೀ ಪಿ.ಆರ್. ರಮೇಶ್:– ಅದರ ಪ್ರತಿ ಇಲ್ಲಿ ಇಲ್ಲ. ರಿಟ್ ಅಪೀಲ್ ಹಾಕಿದ್ದಾರೆ. You are telling that you had filed a Writ Appeal seeking a curative order or some correction.

ಉಪಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ&ನೈ.ಇಲಾಖೆ:– ರಿಟ್ ಅಪೀಲ್‌ನ ಆದೇಶ ಬಂದಿದ್ದು, ದಿನಾಂಕ: 21–8–2019ರಂದು ರಿಟ್ ಅಪೀಲ್‌ನಲ್ಲಿ ಉಚ್ಚನ್ಯಾಯಾಲಯದ ಮುಖ್ಯ ನ್ಯಾಯಾಧೀಶರು ಕೊಟ್ಟಿರುವ ಆದೇಶದಲ್ಲಿ ಇವರನ್ನು ಖಾಯಮಾತಿ ಮಾಡಲು ಅವಕಾಶ ಇಲ್ಲವೆಂದು ಸ್ಪಷ್ಟವಾಗಿ ಹೇಳಿದ್ದಾರೆ. We have sought to file a SLP in the Supreme Court against the order of the court in the Writ Appeal. ದಿನಾಂಕ 01–10–2018ರಂದು ಏಕಸದಸ್ಯಪೀಠದ ನ್ಯಾಯಾಧೀಶರು ಆದೇಶ ಕೊಟ್ಟಿದ್ದರು. ಆ ಆದೇಶದ ಪ್ಯಾರ 6ರಲ್ಲಿ ಕೊಟ್ಟಿರುವ ಸ್ಪಷ್ಟೀಕರಣವನ್ನು ತೆಗೆದುಕೊಳ್ಳಬೇಕೆಂದು ಆ ರಿಟ್ ಅರ್ಜಿಯನ್ನು ವಜಾಗೊಳಿಸಿದ್ದಾರೆ. That means, one thing is clear that these people cannot ask for regularization. ದಿನಾಂಕ 01–10–2018ರ ಉಚ್ಚ ನ್ಯಾಯಾಲಯದ ಆದೇಶದ ಪ್ಯಾರ ನಂ.6ರಲ್ಲಿ ತಿಳಿಸಿರುವ ಅಂಶ ಸ್ಪಷ್ಟವಾಗಿಲ್ಲ, ಅದರ ಬಗ್ಗೆ ಸ್ಪಷ್ಟೀಕರಣ ತೆಗೆದುಕೊಳ್ಳಿ ಎಂದು ಮೇಲ್ಮನವಿಯನ್ನು ವಜಾ ಮಾಡಿದ್ದಾರೆ. ಬಿ.ಆರ್.ಸಿ & ಸಿ.ಆರ್.ಸಿ ಗಳನ್ನು ಕೇವಲ ಒಂದು ವರ್ಷಕ್ಕೆ ಮಾತ್ರ ನೇಮಿಸಿಕೊಳ್ಳಲಾಗಿತ್ತು. The Appointing Authority is not the Government of Karnataka or the Commissioner. ಇವರ ನೇಮಕಾತಿ ಪ್ರಾಧಿಕಾರಿ ಸಿ.ಇ.ಓ ಆಗಿರುತ್ತಾರೆ. ಒಂದು ವರ್ಷದ ನಂತರ ಅವಶ್ಯಕತೆಗಳಿಗನುಗುಣವಾಗಿ ಅವರನ್ನು ಸೇವೆಗೆ ತೆಗೆದುಕೊಳ್ಳಲು ಸಿ.ಇ.ಓ ಗಳಿಗೆ ಸರ್ಕಾರವು ಅಧಿಸೂಚನೆ ಹೊರಡಿಸಿ ನಿರ್ದೇಶನ ಕೊಟ್ಟಿದೆ. ಎಲ್ಲೆಲ್ಲಿ ಅವರ ಅವಶ್ಯಕತೆ ಇದೆ ಅಲ್ಲೆಲ್ಲ ಅವರನ್ನು ಮುಂದುವರೆಸಲಾಗಿದೆ. ಪ್ರಸ್ತುತ ಇರುವ 204 ಬಿ.ಆರ್.ಸಿ & ಸಿ.ಆರ್.ಸಿಗಳಲ್ಲಿ 131 ಜನ ಹಿಂದಿನ 2011ರ ಆದೇಶದಂತೆ ಬಂದರು, ಅವರು ಕಾಲಕಾಲಕ್ಕೆ ಒಂದೊಂದು ವರ್ಷಕ್ಕೆ

/..

ಮುಂದುವರೆದು only 73 persons are newly appointed through the NGOs. One thing is very clear and I don't know how the judge missed it. I can readout the N.R.D.W.P guidelines out if required. ಎನ್.ಆರ್.ಡಿ.ಡಬ್ಲ್ಯು.ಪಿ ಮಾರ್ಗಸೂಚಿ ಏನಿದೆ, ಅದರಲ್ಲಿ 'ಬಿ.ಆರ್.ಸಿ/ಸಿ.ಆರ್.ಸಿ ಗಳನ್ನು ಎನ್.ಜಿ.ಒ ಮುಖಾಂತರ ಹೊರಗುತ್ತಿಗೆ ಆಧಾರದ ಮೇಲೆ ನೇಮಕ ಮಾಡಬೇಕು. They should follow the transparency norms' ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಆದರೆ ನ್ಯಾಯಾಧೀಶರು, "The State Government has created it when the scheme does not permit. The State Government does not have the power to do it" ಎಂದು ಅರ್ಜಿಗಳನ್ನು ವಜಾ ಮಾಡಿದರು. ಅದರ ಮೇಲೆ ಅಡ್ವೋಕೇಟ್ ಜನರಲ್‌ರವರಿಂದ we had sought an opinion. The Advocate General thought fit and told that there is a case for you to appeal. ಅಡ್ವೋಕೇಟ್ ಜನರಲ್‌ರವರಿಂದ ಅನುಮತಿ ಪಡೆದು ರಿಟ್ ಅಪೀಲನ್ನು ಹಾಕಿದೆವು. ಅಲ್ಲಿ ಕೂಡ ಸ್ಪಷ್ಟವಾದ ನಿರ್ದೇಶನ ಬರಲಿಲ್ಲ. One thing is clear that they cannot seek for regularization of those jobs. ಅದು ಕ್ಲಿಯರ್ ಆಯಿತು. ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ 01-10-2018ರಂದು ನೀಡಲಾದ ಆದೇಶದಲ್ಲಿ ಒಂದು ಪ್ಯಾರಾದಲ್ಲಿ ಅದು ಕ್ಲಿಯರ್ ಆಗಿಲ್ಲ, ಸ್ಪಷ್ಟನೆಯನ್ನು ತೆಗೆದುಕೊಳ್ಳಿ ಎಂದು ನ್ಯಾಯಾಧೀಶರು ಹೇಳಿದರು. In the meantime, whatever said and done, ಒಂದು ಸ್ಕೀಂನಲ್ಲಿ ನೇಮಕವಾದ ನೌಕರರು ಆ ಸ್ಕೀಂ ಇರುವವರೆಗೂ ಇರುತ್ತಾರೆ. ದಿನಾಂಕ 15.8.2019 ರಿಂದ "ಜಲ್ ಜೀವನ್ ಮಿಷನ್" ಎಂಬ ಮಂತ್ರಾಲಯವು ಸೃಷ್ಟಿಯಾಗಿದೆ. The N.R.D.W.P will be subsumed in 'Jal Jeevan Mission', the guidelines of which are in the formulation stage. ಮುಂದಿನ ಸ್ಕೀಂನಲ್ಲಿ ಭಾರತ ಸರ್ಕಾರವು ಆ ವಯೋಮಿತಿ ಪ್ರಕಾರ ಅರ್ಹತೆಗಳನ್ನು ಪರಿಗಣಿಸಿ ಅವಕಾಶ ಮಾಡಿಕೊಟ್ಟರೆ we can help them. If we file a SLP, we have to await the decision of the Supreme Court. ಎಸ್.ಎಲ್.ಪಿ ಯನ್ನು ದಾಖಲಿಸುವ

ಬಗ್ಗೆ ಅಡ್ವೋಕೇಟ್ ಜನರಲ್ ರವರ ಅಭಿಪ್ರಾಯವನ್ನು ತೆಗೆದುಕೊಂಡು ನಂತರ ಕ್ರಮ ತೆಗೆದುಕೊಳ್ಳುತ್ತೇವೆ.

**Sri P.R. RAMESH:** What is the status of the scheme as on today? ಸ್ಕೀಂ ಬಗ್ಗೆ ಸ್ಪಷ್ಟೀಕರಣ ಕೊಡಿ.

**DEPUTY SECRETARY (ADMIN), RWS&SD:** The status of the scheme is that guidelines of the new scheme 'Jal Jeevan Mission' are not issued. ಅದರ ಗೈಡ್‌ಲೈನ್ಸ್ ಇನ್ನೂ ಇಶ್ಯೂ ಆಗಿಲ್ಲ.

**PRINCIPAL SECRETARY TO GOVT., RDPR:** The status is that the N.R.D.W.P scheme is getting closed.

**Sri P.R. RAMESH:** Then naturally this will be infructuous.

**PRL-SECY, RDPR:** Till that scheme is there, they should be continued.

**Sri P.R. RAMESH:** That means, till the new scheme starts, they will remain.

**ಪ್ರಧಾನ ಕಾರ್ಯದರ್ಶಿ(ಪ್ರ), ಗ್ರಾ.ಅ.&ಪಂ.ರಾಜ್ ಇಲಾಖೆ:-** ಹೊಸ ಸ್ಕೀಂನ ಮಾರ್ಗಸೂಚಿಗಳು ಹಿಂದೆ ಇದ್ದ ಸ್ಕೀಂನ ಮಾರ್ಗಸೂಚಿಗಳಿಗೆ ವ್ಯತಿರಿಕ್ತವಾಗಿದ್ದರೆ ಆ ಹಂತದಲ್ಲಿ ಇವರಿಗೆ ತೊಂದರೆಯಾಗುತ್ತದೆ. ಅದರ ಮಾರ್ಗಸೂಚಿಗಳೆಲ್ಲಾ ಇನ್ನೂ ಬರಬೇಕು. ಸ್ಕೀಂ ಬರುವ ತನಕ ಮುಂದುವರೆಸಬೇಕೆಂದು ಆದೇಶ ಇದೆ ಅಲ್ಲಿಯವರೆಗೂ ಇದನ್ನು ಪೆಂಡಿಂಗ್ ಇಡಬೇಕಾಗುತ್ತದೆ.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ಗ್ರಾಮೀಣ ಕುಡಿಯುವ ನೀರು & ನೈರ್ಮಲ್ಯ ಇಲಾಖೆಯ ಉಪಕಾರ್ಯದರ್ಶಿಯವರಾದ ತಾವು ಆ ಜಾಗದಲ್ಲಿ ಕುಳಿತು ಮಾತನಾಡುವಾಗ ಸ್ವಲ್ಪ ಜವಾಬ್ದಾರಿಯುತವಾಗಿ ಮಾತನಾಡಬೇಕು. ಇಲ್ಲಿ ಎಲ್ಲವೂ ರೆಕಾರ್ಡ್ ಆಗಿದೆ. ಜಡ್ಜ್‌ರವರಿಗೆ ಆ ಟೈಮ್‌ನಲ್ಲಿ ಏನಾಯಿತೋ ಏನೋ ಹೀಗೆ ಬರೆದಿದ್ದಾರೆ ಎಂದು ಮಾತನಾಡಿದಿರಿ.





**ಉಪಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ&ನೈ.ಇಲಾಖೆ:-** ಆ ಹೇಳಿಕೆಯನ್ನು ನಾನು ವಾಪಸ್ ತೆಗೆದುಕೊಳ್ಳುತ್ತೇನೆ. I withdraw my statement, Sir.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ತಾವು ಕಳೆದ ಸಮಿತಿ ಸಭೆಯ ನಡವಳಿಗಳಿಗೆ ಸಂಬಂಧಪಟ್ಟಂತೆ ಮಾತ್ರ ಉತ್ತರ ಕೊಡಬೇಕಾಗಿತ್ತು. ಈ ಸಮಿತಿಯಲ್ಲಿ ಒಂದು ತೀರ್ಮಾನವನ್ನು ತೆಗೆದುಕೊಂಡ ಮೇಲೆ ಮತ್ತೆ ಉಚ್ಚ ನ್ಯಾಯಾಲಯಕ್ಕೆ ಹೋದರೆ, ದ್ವಿಸದಸ್ಯ ಪೀಠದಲ್ಲಿಯೂ ಕೂಡ ನಿಮಗೆ ಛೀಮಾರಿ ಹಾಕುತ್ತಾರೆ. ಅರ್ಜಿ ಇಲ್ಲಿ ಇರುವಾಗ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಗುವುದಕ್ಕೆ ನಿಮಗೆ ಯಾರು ಅನುಮತಿ ಕೊಟ್ಟಿದ್ದಾರೆ? ನಿಮ್ಮದೇನು ಸರ್ವಾಧಿಕಾರಿ ಧೋರಣೆಯೇ? ಜನಾದೇಶ ಎಲ್ಲಿಯವರೆಗೂ ಇರುವುದೋ ಅಲ್ಲಿಯವರೆಗೂ ಆ ಸ್ಕೀಂ ಮುಂದುವರೆಯುತ್ತಲೇ ಇರುತ್ತದೆ ಅದನ್ನು ಗಮನದಲ್ಲಿಟ್ಟುಕೊಳ್ಳಬೇಕಾಗುತ್ತದೆ. ರಾಜ್ಯದಲ್ಲಿ ನಿರುದ್ಯೋಗ ತಾಂಡವವಾಡುತ್ತಿದೆ. ಈ ಯೋಜನೆಗೆ ಪದವೀಧರರನ್ನು ದಿನಪತ್ರಿಕೆಯಲ್ಲಿ ಆಹ್ವಾನಿಸಿ, ರೋಸ್ಟರ್ ಪದ್ಧತಿ ಪ್ರಕಾರ ಒಂದು ವರ್ಷದ ಅವಧಿಗೆ ನೇಮಕ ಮಾಡಿಕೊಂಡಿದ್ದೀರಿ. ಇದರ ಬಗ್ಗೆ ಚರ್ಚೆಗಳಾಗಿ ಎಲ್ಲವೂ ರೆಕಾರ್ಡ್ ಆಗಿವೆ. ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರಿನ ಯೋಜನೆ ಇನ್ನೂ ಇರುವಾಗ ತಮ್ಮನ್ನು ಮತ್ತೆ ಸೇವೆಯಲ್ಲಿ ಮುಂದುವರೆಸಲು ಕೋರಿ ಬಿ.ಆರ್.ಸಿ/ಸಿ.ಆರ್.ಸಿ.ಗಳು ನ್ಯಾಯಾಲಯದ ಮೊರೆ ಹೋದರು. ನ್ಯಾಯಾಲಯವು ಇವರನ್ನು ಸೇವೆಯಲ್ಲಿ ಮುಂದುವರೆಸಬೇಕೆಂದು ಹೇಳಿದೆ. ನೀವು ಅವರನ್ನು ಸೇವೆಯಲ್ಲಿ ಮುಂದುವರೆಸುವುದಕ್ಕೆ ನಿರ್ದೇಶನ ನೀಡಿದ್ದೇವೆ, ಕೆಲವು ಜನರು ಕರ್ತವ್ಯ ಮಾಡುತ್ತಿದ್ದಾರೆ, ಕೆಲವರನ್ನು ಎನ್.ಜಿ.ಓ ಮುಖಾಂತರ ಹೊಸದಾಗಿ ತೆಗೆದುಕೊಂಡಿದ್ದಾರೆ ಎಂದು ಹೇಳಿದಿರಿ. ಸರ್ಕಾರದ ನಿರ್ಣಯ ಖಂಡಿಕೆ 45 ಮತ್ತು 74ರನ್ನು ಅನುಷ್ಠಾನಗೊಳಿಸಿ ಎಂದು ಅರ್ಜಿಯಲ್ಲಿ ಹೇಳಿದೆ. ಅದನ್ನು ಹೇಳದೇ ತಾವು ನಿರ್ದೇಶನ ಕೊಟ್ಟಿದ್ದೇವೆ, ಎಂದೆಲ್ಲಾ ಹೇಳುತ್ತಿದ್ದೀರಿ ಎಲ್ಲಿ ತೆಗೆದುಕೊಂಡಿದ್ದಾರೆ, ನಿಮ್ಮ ಬಳಿ ಅದರ ಮಾಹಿತಿ ಇದೆಯೇ?

**ಉಪಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ&ನೈ.ಇಲಾಖೆ:-** ಇದೆ.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ಸರ್ಕಾರದ ನಿರ್ಣಯ ಕಂಡಿಕೆ 45 & 74ರ ಪ್ರಕಾರ ಎನ್.ಜಿ.ಓ ಎಂಬ ಪದವೇ ಇರಬಾರದು ಎಂದು ಆದೇಶ ಇದೆ. ಅದನ್ನೇ ಈ ಅರ್ಜಿಯಲ್ಲಿ ಪ್ರಶ್ನೆ ಮಾಡಲಾಗಿದೆ. ಅರ್ಜಿಯಲ್ಲಿ ವಿಧಾನ ಪರಿಷತ್ತಿನಲ್ಲಿ ಕೂಡ ಈ ಪ್ರಶ್ನೆ ಬಂದು, ಚರ್ಚೆಯಾಗಿ ಅಂದಿನ ಸಚಿವರಾಗಿದ್ದ ಶ್ರೀ ಹೆಚ್.ಕೆ. ಪಾಟೀಲರು ಮೀಟಿಂಗ್ ಮಾಡಿ ಕಂಡಿಕೆ 45 & 74 ರಂತೆ

ಅದನ್ನು ಅನುಷ್ಠಾನಗೊಳಿಸಿ ಎಂದು ಹೇಳಿದ್ದರು. ಅರ್ಜಿ ಸಮಿತಿಯು ನಿರ್ಣಯ ತೆಗೆದುಕೊಂಡ ನಂತರವೂ ಮತ್ತೆ ಕೋರ್ಟ್‌ಗೆ ಹೋದರೆ ನ್ಯಾಯಾಲಯದಲ್ಲಿ ದ್ವಿಸದಸ್ಯ ಪೀಠ ಕೂಡ ಅವರನ್ನು ಸೇವೆಯಲ್ಲಿ ಮುಂದುವರೆಸಿ ಎಂದು ಛೀಮಾರಿ ಹಾಕುತ್ತಾರೆ. ನಿಮ್ಮನ್ನು ಕೇಳುವವರು ಯಾರೂ ಇಲ್ಲವೇ? ಅರ್ಜಿ ಇಲ್ಲಿರುವಾಗ ನಮ್ಮ ನಿರ್ದೇಶನವಿಲ್ಲದೇ ಮಾನ್ಯ ಸರ್ವೋಚ್ಛ ನ್ಯಾಯಾಲಯಕ್ಕೆ ಹೋಗುವುದಕ್ಕೆ ನಿಮಗೆ ಯಾರು ಅನುಮತಿ ಕೊಟ್ಟರು? ಸಮಿತಿ ಎಂದರೆ ನಿಮಗೆ ಬೆಲೆ ಇಲ್ಲವೇ? ಕಡೇ ಪಕ್ಷ ಕೋರ್ಟ್‌ಗೆ ಹೋಗಬೇಕಾದರೆ ಸಮಿತಿಯ ಅನುಮತಿ ಪಡೆಯಬೇಕಾಗಿತ್ತು. ಮಾನ್ಯ ಸರ್ವೋಚ್ಛ ನ್ಯಾಯಾಲಯಕ್ಕೆ ಹೋಗುವುದಾದರೆ, ಈ ಸಮಿತಿ ಏಕೆ ಬೇಕು, ಅರ್ಜಿ ಏಕೆ ಬೇಕು? ಉಚ್ಛ ನ್ಯಾಯಾಲಯದ ದ್ವಿಸದಸ್ಯ ಪೀಠದಲ್ಲಿ ಕೂಡ ಈ ಯೋಜನೆಯಲ್ಲಿ ಮುಂದುವರೆಸಬೇಕೆಂದು ಅವರ ಪರವಾಗಿ ಆದೇಶವಾಯಿತು. ಆದರೆ ನೀವು ಜಡ್ಜ್ ಬಗ್ಗೆ ಮಾತನಾಡುತ್ತೀರಲ್ಲಾ, ಜಡ್ಜ್‌ರವರು ಯಾವ ಮೂಡ್‌ನಲ್ಲಿ ಮಾತನಾಡಿದರೂ ಅದನ್ನು ಇಲ್ಲಿ ಜವಾಬ್ದಾರಿಯುತವಾದ ಸ್ಥಳದಲ್ಲಿ ಕುಳಿತುಕೊಂಡು ಮಾತನಾಡಬಾರದು. ಇದು ಸಮಿತಿಗೆ ಹಕ್ಕುಚ್ಯುತಿಯಾಗುತ್ತದೆ. ನಮ್ಮ ಸಮಿತಿ ಏನು ನಿರ್ಣಯ ತೆಗೆದುಕೊಂಡಿದೆ ಆ ನಿರ್ಣಯಕ್ಕೆ ವಿರುದ್ಧವಾಗಿ ಇವರು ಮಾನ್ಯ ಸರ್ವೋಚ್ಛ ನ್ಯಾಯಾಲಯಕ್ಕೆ ಹೋಗುವುದಾದರೆ ಈ ಸಮಿತಿಗೆ ಹಕ್ಕುಚ್ಯುತಿ ಆಗುತ್ತದೆ.

**ಅಧ್ಯಕ್ಷರು:–** ಈ ಸಮಿತಿಯು ತೀರ್ಮಾನ ತೆಗೆದುಕೊಂಡಾಗ ಅದು ಅನುಷ್ಠಾನವಾಗದಿದ್ದರೆ ಅದರ ಬಗ್ಗೆ ಮಾತ್ರ ಹೇಳಬೇಕಾಗುತ್ತದೆ. ಸಮಿತಿಯ ನಿರ್ಣಯ ಏಕೆ ಅನುಷ್ಠಾನವಾಗಿಲ್ಲ ಎಂದು ಮಾನ್ಯ ಸದಸ್ಯರು ಕೇಳುತ್ತಿದ್ದಾರೆ.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:–** ಈ ಯೋಜನೆಯು 2020ವರೆಗೂ ಇದೆ. ಬಿ.ಆರ್.ಸಿ/ಸಿ.ಆರ್.ಸಿ ಗಳ ಸೇವೆಯನ್ನು ಈ ಯೋಜನೆ ಇರುವವರೆಗೂ ಮುಂದುವರೆಸಿ ಎಂದು ಇದೆ. ಬೇರೆ ಸ್ಕೀಂ ಬಂದರೂ ಈ ಯೋಜನೆ ಅದರಲ್ಲಿ ವಿಲೀನವಾಗುತ್ತದೆ.

**ಶ್ರೀ ಎಸ್.ವ್ಹಿ. ಸಂಕನೂರ:–** ಹಿಂದೆ ಈ ವಿಷಯವು ಚರ್ಚೆಗೆ ಬಂದಾಗ ಮಾನ್ಯ ಸಚಿವರು ಕೂಡ ನಿರ್ದೇಶನ ಕೊಟ್ಟಿದ್ದರು, ಹೈಕೋರ್ಟ್ ಆದೇಶದ ಪ್ರಕಾರ ಸ್ಕೀಂ ಇರುವವರೆಗೂ ಇದ್ದವರನ್ನೇ ಮುಂದುವರೆಸಬೇಕು, ಶ್ರೇಷ್ಠ ನ್ಯಾಯಾಲಯದ ತೀರ್ಪು ಉಲ್ಲಂಘನೆಯಾಗದಂತೆ 7 ದಿವಸಗಳಲ್ಲಿ ಕ್ರಮ ಕೈಗೊಳ್ಳಬೇಕೆಂದು ನಿರ್ದೇಶನ ಕೊಟ್ಟಿದ್ದರು. ಹಿಂದಿನ ಸಮಿತಿಯಲ್ಲಿ ಇದೇ ವಿಷಯವಾಗಿ ನಾನು ಮಾತನಾಡುವಾಗ, ಧಾರವಾಡದಲ್ಲಿ ಅಲ್ಲಿನ ಸಿ.ಇ.ಓ ರವರು ಇದ್ದವರನ್ನು ಕಂಟಿನ್ಯೂ ಮಾಡಿಲ್ಲ, ಏಕೆ ಕಂಟಿನ್ಯೂ ಮಾಡಿಲ್ಲ ಎಂದು ಪ್ರಶ್ನೆ ಮಾಡಿದಾಗ ಸಭೆಯಲ್ಲಿ ನಿರ್ಧಾರ

ಮಾಡಿರುವ ದಾಖಲೆಯನ್ನು ತೆಗೆದು ನೋಡಿದಾಗ ಬಿ.ಆರ್.ಸಿ/ಸಿ.ಆರ್.ಸಿ ಗಳನ್ನು ತೆಗೆದು ಹಾಕಿದ್ದರೆ ಅವರನ್ನು ವಾಪಸ್ ಸೇವೆಗೆ ತೆಗೆದುಕೊಳ್ಳುವುದಕ್ಕೆ ನಿರ್ದೇಶನ ಕೊಡುತ್ತೇವೆ ಎಂದು ಹೇಳಿದರು. ಅಂದೇ ನಾನು ಒಂದು ಪತ್ರ ಬರೆದೆ. ದಿನಾಂಕ: 18.1.2019ರಂದು ನಡೆದ ಅರ್ಜಿಗಳ ಸಮಿತಿ ಸಭೆಯಲ್ಲಿ ಸೇವೆಯಿಂದ ತೆಗೆದು ಹಾಕಿರುವ ಬಿ.ಆರ್.ಸಿ/ಸಿ.ಆರ್.ಸಿ ಗಳನ್ನು ವಾಪಸ್ ಸೇವೆಗೆ ತೆಗೆದುಕೊಳ್ಳುವ ನಿರ್ಣಯದ ಪ್ರಕಾರ ಅವರನ್ನು ಸೇವೆಗೆ ತೆಗೆದುಕೊಳ್ಳಬೇಕೆಂದು ಪತ್ರ ಕಳುಹಿಸಿದರೆ ಧಾರವಾಡದ ಸಿ.ಇ.ಓ ರವರು ಅವರನ್ನು ಸೇವೆಗೆ ತೆಗೆದುಕೊಂಡಿಲ್ಲ. ಸರ್ಕಾರ ಮತ್ತು ಈ ಸಮಿತಿಯು ಇದ್ದವರನ್ನು ಸೇವೆಯಲ್ಲಿ ಮುಂದುವರೆಸಬೇಕೆಂದು ನಿರ್ದೇಶನ ಕೊಟ್ಟಿದೆ, ಈ ಸಮಿತಿಯ ನಿರ್ಣಯದ ಪ್ರಕಾರ ಬಿ.ಆರ್.ಸಿ/ಸಿ.ಆರ್.ಸಿ ಗಳನ್ನು ವಾಪಸ್ ಸೇವೆಗೆ ತೆಗೆದುಕೊಳ್ಳಬೇಕೆಂದು ಪತ್ರ ಬರೆದಿದ್ದೇನೆ, ಆದರೂ ಧಾರವಾಡದಲ್ಲಿ ಸಿ.ಇ.ಓ ರವರು ಅವರನ್ನು ವಾಪಸ್ ಸೇವೆಗೆ ತೆಗೆದುಕೊಂಡಿಲ್ಲ. ಅವರ ಮೇಲೆ ಯಾವ ಕ್ರಮವನ್ನು ತೆಗೆದುಕೊಳ್ಳುತ್ತೀರಿ ತಿಳಿಸಿ. ಅವರ ಮನಸ್ಸಿಗೆ ಬಂದ ಹಾಗೆ ಮಾಡುತ್ತಾರೆ, ವಿಧಾನ ಪರಿಷತ್ ಸದಸ್ಯರ ಪತ್ರಕ್ಕೆ ಕಿಮ್ಮತ್ತಿಲ್ಲವೇ? ಸಭೆಯ ನಿರ್ಣಯಕ್ಕೆ, ಸಚಿವರ ಆದೇಶಕ್ಕೆ ಕಿಮ್ಮತ್ತಿಲ್ಲ, ಇದು ಈಗ ನಿರ್ಣಯವಾಗಲೇ ಬೇಕು. ಸಚಿವರು, ಸಮಿತಿ ನಿರ್ದೇಶನ ಕೊಟ್ಟಿದೆ, ಅದನ್ನು ಸಮಿತಿಯಲ್ಲಿ ಒಪ್ಪಿಕೊಂಡಿದ್ದಾರೆ. ಯಾರನ್ನೂ ಸೇವೆಯಿಂದ ತೆಗೆದಿಲ್ಲ ಎಂದು ಹೇಳಿದ್ದಾರೆ. ಆದರೆ ಧಾರವಾಡದಲ್ಲಿ ಅವರನ್ನು ಸೇವೆಯಿಂದ ತೆಗೆದಿದ್ದಾರೆ.

**ಅಧ್ಯಕ್ಷರು:-** ನಿಮ್ಮ ಅಧೀನ ಅಧಿಕಾರಿಗಳಿಗೆ ಇದರ ಬಗ್ಗೆ ಹೇಳಿ, ದಿನಾಂಕ 18.1.2019ರ ಸಮಿತಿ ಸಭೆಯ ನಡವಳಿಯ ಪುಟ 6ರ ಮೊದಲನೇ ಪ್ಯಾರದಲ್ಲಿ ಇದೆ.

**ಶ್ರೀ ಎಸ್.ವ್ಹಿ. ಸಂಕನೂರ:-** ಇದು ಸರ್ಕಾರದ ಯೋಜನೆಯಾಗಿದೆ, ಕೇಂದ್ರ ಸರ್ಕಾರ ಹಣ ಕೊಡುತ್ತದೆ, ಅವರನ್ನು ಸೇವೆಯಲ್ಲಿ ಮುಂದುವರೆಸಿದರೆ ನಿಮಗೇನು ಆಗುತ್ತದೆ?

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ಸರ್ಕಾರದ ಆದೇಶ ಮಾಡಿದ್ದರೂ ನೀವೇಕೆ ಅವರನ್ನು ಕಂಟಿನ್ಯೂ ಮಾಡುತ್ತಿಲ್ಲ? ಅವರನ್ನು ಸೇವೆಗೆ ತೆಗೆದುಕೊಂಡಿದ್ದೇವೆ ಎಂದು ಸಮಿತಿಗೆ ಸುಳ್ಳು ಮಾಹಿತಿ ಕೊಡುತ್ತೀರಾ? ಅವರನ್ನು ಪುನಃ ಸೇವೆಗೆ ತೆಗೆದುಕೊಂಡಿದ್ದರೆ ಅವರೇಕೆ ಕೋರ್ಟ್ ಹೋಗುತ್ತಿದ್ದರು? ಮಾನ್ಯ ಸರ್ವೋಚ್ಚ ನ್ಯಾಯಾಲಯದಲ್ಲಿ ಪ್ರಕರಣವನ್ನು ದಾಖಲಿಸುವುದಕ್ಕೆ ಯಾರು ಅನುಮತಿ ಕೊಟ್ಟರು? ನಮ್ಮ ಸಮಿತಿಗೆ ಹಕ್ಕು ಚ್ಯುತಿಯಾಗಿದೆ.

ಉಪಕಾರ್ಯದರ್ಶಿ (ಆಡಳಿತ) ಗ್ರಾ.ಕು.ನೀ&ನೈ.ಇಲಾಖೆ:- ಧಾರವಾಡದಲ್ಲಿ ಈಗ ಯಾರೂ ಬಿ.ಆರ್.ಸಿ/ಸಿ.ಆರ್.ಸಿ ಇಲ್ಲ.

**ಶ್ರೀ ಎಸ್.ವ್ಹಿ. ಸಂಕನೂರ:-** ಸೇವೆಯಲ್ಲಿ ಇದ್ದವರನ್ನು ತೆಗೆದು ಹಾಕದೇ ಮುಂದುವರೆಸಿ ಎಂದು ಹೇಳುತ್ತಿದ್ದೇವೆ. ಧಾರವಾಡದಲ್ಲಿ ಬಿ.ಆರ್.ಸಿ/ಸಿ.ಆರ್.ಸಿ ಗಳು ಇದ್ದರು ಅವರನ್ನು ವಾಪಸ್ ತೆಗೆದುಕೊಳ್ಳಬೇಕೆಂದು ಸಭೆಯಲ್ಲಿ ನಿರ್ಣಯವಾಗಿದೆ ಆದರೂ ಅವರನ್ನು ವಾಪಸ್ ತೆಗೆದುಕೊಂಡಿಲ್ಲ. ಸಮಿತಿಗೆ ಸರಿಯಾದ ಮಾಹಿತಿ ಕೊಡಬೇಕು.

**ಶ್ರೀ ಮರಿತಿಬ್ಬೇಗೌಡ:-** ಮಾನ್ಯ ಸದಸ್ಯರು ಹೇಳಿದ ಹಾಗೆ ಕೋರ್ಟ್ ಆದೇಶದ ಪ್ರಕಾರ ಅವರನ್ನು ಸೇವೆಯಿಂದ ತೆಗೆದಿಲ್ಲ, ಅವರನ್ನು ರಿಲೀವ್ ಮಾಡಿದ್ದರೆ ವಾಪಸ್ ತೆಗೆದುಕೊಳ್ಳುತ್ತೇವೆ ಎಂದು ಹೇಳಿದರು. ಮಾನ್ಯ ಸಚಿವರು ಕೂಡ ಆದೇಶ ಮಾಡಿದರು. ಆದರೆ ಇಂದಿನವರೆಗೂ ಅವರನ್ನು ಏಕೆ ವಾಪಸ್ ಸೇವೆಗೆ ತೆಗೆದುಕೊಂಡಿಲ್ಲ? ಯಾರು ತಪ್ಪು ಮಾಡಿದ್ದಾರೆ? ಸಚಿವರು ಹೇಳಿದರೂ ಕೂಡ, ಈ ಸಮಿತಿಯಲ್ಲಿ ಮಾನ್ಯ ಸದಸ್ಯರುಗಳು ಚರ್ಚೆ ಮಾಡಿ ಅದನ್ನು ಇಲಾಖೆಯ ಗಮನಕ್ಕೆ ತಂದರೂ ಕೂಡ ಇಲಾಖಾ ಅಧಿಕಾರಿಗಳು ಅದನ್ನು ಅನುಷ್ಠಾನ ಮಾಡಿಲ್ಲ ಎಂದರೆ ಈ ಸಮಿತಿಗೆ ಮೂರು ಕಾಸಿನ ಕಿಮ್ಮತ್ತಿಲ್ಲವೇ?

**ಶ್ರೀ ಎಸ್.ವ್ಹಿ. ಸಂಕನೂರ:-** ಧಾರವಾಡದ ಸಿ.ಇ.ಓ ರವರ ಮೇಲೆ ಯಾವ ಕ್ರಮ ತೆಗೆದುಕೊಳ್ಳುತ್ತೀರಿ ತಿಳಿಸಿ ಅದು ಸಮಿತಿಯಲ್ಲಿ ನಿರ್ಣಯವಾಗಬೇಕು.

**ಶ್ರೀ ಮರಿತಿಬ್ಬೇಗೌಡ:-** ಇದರ ಬಗ್ಗೆ ಹಕ್ಕುಚ್ಯುತಿ ಹಾಕಬೇಕು. ದಿನಾಂಕ: 18.1.2019ರಂದು ಸಮಿತಿ ನಿರ್ಣಯ ಮಾಡಿದೆ.

**ಪ್ರಧಾನ ಕಾರ್ಯದರ್ಶಿ (ಪ್ರ), ಗ್ರಾ.ಅ&ಪಂ.ರಾ. ಇಲಾಖೆ:-** ದಿನಾಂಕ: 18.1.2019ರ ಸಮಿತಿಯ ನಿರ್ಣಯವನ್ನು ಪರಿಶೀಲನೆ ಮಾಡಿ ಅದನ್ನು ಆಯುಕ್ತರಿಗೆ ಕೊಟ್ಟು ಮಾಹಿತಿ ತರಿಸಿಕೊಡುತ್ತೇನೆ.

**ಶ್ರೀ ಎಸ್.ವ್ಹಿ. ಸಂಕನೂರ:-** ಸೇವೆಯಿಂದ ತೆಗೆದು ಹಾಕಿರುವವರನ್ನು ವಾಪಸ್ ಸೇವೆಗೆ ತೆಗೆದುಕೊಳ್ಳಬೇಕು.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ಸಮಿತಿಯ ನಿರ್ದೇಶನಕ್ಕೆ ವಿರುದ್ಧವಾಗಿ ನಡೆದರೆ ನಮ್ಮ ಸಮಿತಿಗೆ ಹಕ್ಕುಚ್ಯುತಿಯಾಗುತ್ತದೆ, ಇದನ್ನು ಹಕ್ಕುಚ್ಯುತಿಗೆ ತರಬೇಕು.

**ಶ್ರೀ ಪಿ.ಆರ್. ರಮೇಶ್:–** ಮಾನ್ಯ ಉಚ್ಚ ನ್ಯಾಯಾಲಯವು ದಿನಾಂಕ: 01.10.2018ರಂದು ಏಕಸದಸ್ಯ ಪೀಠವು ಆದೇಶ ಕೊಟ್ಟಿದೆ. ಆ ಆದೇಶ ಬಂದ ಮೇಲೆ it was discussed here. Accordingly, we have made some decision from this committee. ತದನಂತರ ಸದರಿ ತೀರ್ಪಿನ ವಿರುದ್ಧ ರಿಟ್ ಅಪೀಲನ್ನು ದಾಖಲಿಸಿದರು. ರಿಟ್ ಅಪೀಲ್ ಹಾಕಿದಾಗ ದಿನಾಂಕ: 21.8.2019ರಂದು ಮಾನ್ಯ ಉಚ್ಚ ನ್ಯಾಯಾಲಯವು ಆದೇಶ ಕೊಟ್ಟಿದೆ. ನಮ್ಮ ಸಮಿತಿಯಲ್ಲಿ ನಿರ್ಣಯ ತೆಗೆದುಕೊಳ್ಳಲಾಗಿದೆ, ಧಾರವಾಡದ ಕೆಲವು ಅಂಶಗಳನ್ನು ತಿಳಿಸಿದ್ದೀರಿ, ಎನ್.ಆರ್.ಡಿ.ಡಬ್ಲ್ಯು.ಪಿ ಗೆ ಸಂಬಂಧಪಟ್ಟ ಕೆಲವು ಅಂಶಗಳು ಬಂದಿವೆ, ಇದರ ಮಧ್ಯೆ ಸಮಿತಿಯಲ್ಲಿ ಅರ್ಜಿ ವಿಚಾರಣೆ ನಡೆಯುತ್ತಿದ್ದರೂ ನೀವು ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಹೋಗಿದ್ದೀರಿ.

**ಪ್ರಧಾನ ಕಾರ್ಯದರ್ಶಿ (ಪ್ರ), ಗ್ರಾ.ಅ&ಪಂ.ರಾ. ಇಲಾಖೆ:–** ಮಾನ್ಯ ಸರ್ವೋಚ್ಚ ನ್ಯಾಯಾಲಯಕ್ಕೆ ಇನ್ನೂ ಹೋಗಿಲ್ಲ. ಅಡ್ವೋಕೇಟ್ ಜನರಲ್‌ರವರ ಅಭಿಪ್ರಾಯಕ್ಕೆ ಕಡತ ಹೋಗಿದೆ. ಅಂತಿಮವಾಗಿ ಅನುಷ್ಠಾನಗೊಳಿಸುವುದಕ್ಕೆ ಮುಂಚೆ ಅಡ್ವೋಕೇಟ್ ಜನರಲ್‌ರವರಿಗೆ ಅಭಿಪ್ರಾಯಕ್ಕೆ ಕಳುಹಿಸಿಕೊಡುತ್ತೇವೆ.

**ಶ್ರೀ ಪಿ.ಆರ್. ರಮೇಶ್:–** ಈ ಸ್ಕೀಂ ನಲ್ಲಿ ಇದ್ದವರನ್ನು ಮುಂದುವರೆಸಿ ಎಂದು ಹೇಳಿದ್ದಾರೆ. It is very simple.

**ಪ್ರಧಾನ ಕಾರ್ಯದರ್ಶಿ (ಪ್ರ), ಗ್ರಾ.ಅ&ಪಂ.ರಾ. ಇಲಾಖೆ:–** ಕಂಟಿನ್ಯೂ ಮಾಡುತ್ತಿದ್ದೇವೆ.

**ಶ್ರೀ ಪಿ.ಆರ್. ರಮೇಶ್:–** ಇದನ್ನು ಪ್ರತಿಷ್ಠೆಯಾಗಿ ತೆಗೆದುಕೊಳ್ಳುತ್ತಿದ್ದೀರಿ. ಸಮಿತಿಯ ನಿರ್ಣಯವನ್ನು overrule ಮಾಡಿರುವುದಕ್ಕಾಗಿ ನೀವು 99 ದಿನಗಳ ವಿಳಂಬವನ್ನು condone ಮಾಡಿದ್ದೀರಿ. ಅಂದರೆ, you want to override this committee. ಅಲ್ಲಿ ನಿಮಗೆ ಹಕ್ಕುಚ್ಯುತಿ ಬರುತ್ತದೆ.

**ಅಧ್ಯಕ್ಷರು:–** ಯಾರೇ ತಪ್ಪು ಮಾಡಿದರೂ ತಪ್ಪಾಗುತ್ತದೆ. ವಿಷಯವನ್ನು ಗಮನಿಸಬೇಕಾಗುತ್ತದೆ, ಇದು ಸಭೆಗೆ ಅಗೌರವವಾಗುತ್ತದೆ. ಯಾರೂ ಇಲ್ಲವೆಂದು ಹೇಳುತ್ತೀರಿ, ಇದ್ದರೆ ಅವರನ್ನು ವಾಪಸ್ ಸೇವೆಗೆ ತೆಗೆದುಕೊಳ್ಳುತ್ತೀರಿ ಎಂದು ಅರ್ಥವಾಗುತ್ತದೆ. ಯಾರಾದರೂ

245



ನೌಕರರು ಕೆಲಸ ಬಿಟ್ಟು ಹೋಗಿದ್ದಾರೆಯೇ? ಇದರ ಬಗ್ಗೆ ಮಾಹಿತಿ ತೆಗೆದುಕೊಂಡು ಅದನ್ನು ಅನುಷ್ಠಾನ ಮಾಡುತ್ತೇವೆಂದು ಹೇಳಿದ್ದಾರೆ.

**ಶ್ರೀ ಮರಿತಿಬ್ಬೇಗೌಡ:–** ಸಮಿತಿ ನಿರ್ಣಯದಂತೆ ಮಾಡಿಲ್ಲ ಎಂದರೆ, ಈ ದಿನ ಸಭೆಯನ್ನು ಕರೆಯುವುದಕ್ಕೆ ಮುಂಚೆ ಇಲಾಖೆಗೆ ನೋಟಿಸ್ ಹೋಗಿರುತ್ತದೆ. ಉತ್ತರಗಳನ್ನು ತಯಾರು ಮಾಡುವುದಕ್ಕೆ ಕಾರ್ಯದರ್ಶಿಯವರ ಅಧ್ಯಕ್ಷತೆಯಲ್ಲಿ ಪೂರ್ವಭಾವಿ ಸಭೆಯನ್ನು ಮಾಡಿ ಎಲ್ಲಾ ಮಾಹಿತಿಗಳನ್ನು ತೆಗೆದುಕೊಂಡು ಬಂದು ರಿಪ್ಲೈ ಕೊಟ್ಟಿದ್ದಾರೆ. ಈಗ ಇದರ ಬಗ್ಗೆ ನಮಗೆ ಗೊತ್ತಿಲ್ಲ, ಪರಿಶೀಲಿಸುತ್ತೇವೆ ಎಂದರೆ ಹೇಗೆ? ಒಂದು ವಾರ ಮುಂಚಿತವಾಗಿ ಇಲಾಖೆಗೆ ನೋಟಿಸ್ ಹೋಗಿರುತ್ತದೆ ಇವರು ಸಭೆಗೆ ಪ್ರಿಪೇರ್ ಆಗಿ ಬರಬೇಕಾಗಿತ್ತು, ಸಮಿತಿಯ ನಿರ್ಣಯವನ್ನು ಓದಬೇಕಾಗಿತ್ತು. ಈ ಸಮಿತಿಯ ನಿರ್ಣಯಕ್ಕೆ ಮೂರು ಕಾಸಿನ ಕಿಮ್ಮತ್ತಿಲ್ಲ ಎಂದರೆ ಹೇಗೆ? ಈ ಸಮಿತಿಯು quasi-judicial body ಆಗಿದೆ. ಸೇವೆಯಿಂದ ತೆಗೆದಿರುವವರನ್ನು ವಾಪಸ್ ತೆಗೆದುಕೊಂಡಿಲ್ಲ, ಅಲ್ಲದೇ ಎಸ್.ಎಲ್.ಪಿ ಹಾಕುವವರಿದ್ದಾರೆ. ಒಂದು ಯೋಜನೆಯು ಮುಕ್ತಾಯವಾಗುವವರೆಗೂ ನೌಕರರನ್ನು ಸೇವೆಯಲ್ಲಿ ಮುಂದುವರೆಸುತ್ತೇವೆ ಎಂದು ಕೋರ್ಟ್ ಆದೇಶವನ್ನು ಒಪ್ಪಿಕೊಂಡ ಮೇಲೆ, ಆ ಯೋಜನೆ 2020ರವರೆಗೂ ಇರುವಾಗ ಯಾರನ್ನು ಹೊರಗೆ ಕಳುಹಿಸಿದ್ದೀರಿ, ಅವರನ್ನು ವಾಪಸ್ ತೆಗೆದುಕೊಂಡು ಆ ಪ್ರಾಜೆಕ್ಟ್ ಮುಗಿಯುವವರೆಗೂ ಸುಮ್ಮನಿರದೇ ಅಪೀಲು ಹೋಗಿದ್ದಾರೆ. ಪ್ರಾಜೆಕ್ಟ್ ಮುಗಿಯುವವರೆಗೂ ಇರದೇ ಕೋರ್ಟ್‌ಗೆ ಹೋಗುವುದು, ಅಪೀಲು ಹಾಕುವುದು, ಎಸ್.ಎಲ್.ಪಿ ಹಾಕಿದರೆ ಏನರ್ಥ? ಈ ಸಮಿತಿಯ ತೀರ್ಮಾನಕ್ಕೆ ಗೌರವವಿಲ್ಲ, ಸಚಿವರ ಅಭಿಪ್ರಾಯಕ್ಕೂ ಗೌರವವಿಲ್ಲ ಎಂದರೆ ಇದು ಮೊಂಡುತನವಲ್ಲವೇ.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:–** ಇದು ನಿಜವಾಗಲೂ ಸೂಕ್ಷ್ಮವಾದ ವಿಷಯ. ಬಿ.ಆರ್.ಸಿ/ಸಿ.ಆರ್.ಸಿ ಗಳ ನೇಮಕಾತಿಗೆ ದಿನಪತ್ರಿಕೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿ, ರೋಸ್ಟರ್ ಪದ್ಧತಿಯಂತೆ ಮೆರಿಟ್ ಲಿಸ್ಟ್ ತಯಾರಿಸಿ ಅದರಂತೆ ಅವರನ್ನು ಆಯ್ಕೆ ಮಾಡಲಾಗಿದೆ. ನಾನು ಪದವೀಧರ ಕ್ಷೇತ್ರದಿಂದ ಆಯ್ಕೆಯಾಗಿದ್ದು, ವಿಧಾನಪರಿಷತ್ತಿನಲ್ಲಿ ಇದರ ಬಗ್ಗೆ ಎರಡು ಬಾರಿ ಚರ್ಚೆಯಾಗಿದೆ. ಈ ಪದವೀಧರರಿಗೆ ನ್ಯಾಯ ಕೊಡಿಸದಿದ್ದರೆ ನಾನೇಕೆ ಇಲ್ಲಿ ಕುಳಿತುಕೊಳ್ಳಬೇಕು? ಸಂಬಂಧಪಟ್ಟ ಸಚಿವರು ಆದೇಶ ಮಾಡಿದ್ದನ್ನು ಅನುಷ್ಠಾನ ಮಾಡಿಲ್ಲ ಎಂದು ಈ ಅರ್ಜಿ ಸಮಿತಿಗೆ ಬಂದಿದೆ. ಅರ್ಜಿ ಸಮಿತಿಯಲ್ಲಿ ಕೂಡ ಇವರನ್ನು ವಾಪಸ್ ಸೇವೆಗೆ ತೆಗೆದುಕೊಳ್ಳಬೇಕೆಂದು ನಿರ್ಣಯ ಮಾಡಿದ್ದರೂ, ನೌಕರರನ್ನು ಸೇವೆಗೆ ತೆಗೆದುಕೊಂಡಿದ್ದೇವೆ ಎಂದು ಸುಳ್ಳು ಹೇಳುತ್ತಾರೆ,

ಆದ್ರೆ ಇವರನ್ನು ಇನ್ನೂ ಸೇವೆಗೆ ತೆಗೆದುಕೊಂಡಿಲ್ಲ ಹಾಗೆ ಕೆಲಸಕ್ಕೆ ತೆಗೆದುಕೊಂಡಿದ್ದರೆ ಈ ಸಮಿತಿಗೆ ಈ ಅರ್ಜಿ ಬರುತ್ತಿರಲಿಲ್ಲ, ಅವರು ಕೋರ್ಟ್‌ಗೂ ಹೋಗುತ್ತಿರಲಿಲ್ಲ. ಹಿಂದೆ ಯಾವರೀತಿ ಅವರನ್ನು ನೇಮಕ ಮಾಡಿಕೊಂಡಿದ್ದಾರೋ ಅದೇ ರೀತಿ ಸೇವೆಯಲ್ಲಿ ಮುಂದುವರೆಸಬೇಕು.

**ಶ್ರೀ ಮರಿತಿಬ್ಬೇಗೌಡ:-** ಕೋರ್ಟ್ ಆದೇಶ ಇದ್ದರೂ ಕೂಡ, ಮಾನ್ಯ ಸಚಿವರ ಆದೇಶ ಮತ್ತು ಸಮಿತಿಯ ನಿರ್ಣಯ ಇದ್ದರೂ ಬಿ.ಆರ್.ಸಿ/ಸಿ.ಆರ್.ಸಿ ಗಳನ್ನು ಯಾರನ್ನೂ ಸೇವೆಯಲ್ಲಿ ಮುಂದುವರೆಸಿಲ್ಲ, ಆದ್ದರಿಂದ ಇದನ್ನು ಹಕ್ಕುಚ್ಯುತಿಗೆ ಮಂಡಿಸಬೇಕು. ಎರಡನೆಯದಾಗಿ ಇದು ಗಂಭೀರವಾದ ವಿಚಾರವಾಗಿದೆ. ಇಲಾಖೆಯ ಕಾರ್ಯದರ್ಶಿ ಮತ್ತು ಅಧಿಕಾರಿಗಳಿಗೆ ಕೋರ್ಟ್ ಆದೇಶಕ್ಕೆ ಗೌರವವಿಲ್ಲ ಅಂದ ಮೇಲೆ ದಯಮಾಡಿ ಮುಂದಿನ ವಾರವೇ ರಾಜ್ಯದ ಮುಖ್ಯಕಾರ್ಯದರ್ಶಿಯವರು ಸಮಿತಿಗೆ ಬರಬೇಕು, ಆಗ ಈ ವಿಷಯವೊಂದನ್ನೇ ವಿಚಾರಣೆಗೆ ತೆಗೆದುಕೊಳ್ಳಬೇಕು, ಬೇರೆ ಯ್ಲಾವುದನ್ನೂ ತೆಗೆದುಕೊಳ್ಳಬಾರದು ಇದು ಸಭೆಯ ನಿರ್ಣಯ.

**Mr. CHAIRMAN:** This is the decision of the committee.

**ಶ್ರೀ ಪಿ.ಆರ್. ರಮೇಶ್:-** ಅವರನ್ನೇ ಸೇವೆಯಲ್ಲಿ ಮುಂದುವರೆಸಿ ಹೊರಗುತ್ತಿಗೆ ಎಂದು ತೆಗೆದುಕೊಳ್ಳಲಾಗಿದೆ. He has agreed to continue. Why did you go to the court? It was wrong to go for a revision appeal. ಅಪೀಲು ಹೋಗಿರುವುದೇ ತಪ್ಪು.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ಪದವೀಧರರು ಸಮಾಜದಲ್ಲಿ ಬಾಳುವುದಕ್ಕೆ ನೀವು ಸಹಕಾರ ಕೊಡಬೇಕು. ಅವರು ಪದವೀಧರರಾಗಿದ್ದು, ಕಷ್ಟಪಟ್ಟು ಹಳ್ಳಿಗಳಲ್ಲಿ ಕೆಲಸ ಮಾಡುತ್ತಾರೆ ಎಂದರೆ ಅವರನ್ನು ಪ್ರೋತ್ಸಾಹ ಮಾಡಬೇಕು.

**ಶ್ರೀ ಮರಿತಿಬ್ಬೇಗೌಡ:-** ಈ ವಿಷಯಕ್ಕೆ ಸಂಬಂಧಪಟ್ಟಂತೆ ಕೋರ್ಟ್ ಆದೇಶಕ್ಕೆ ಮಾನ್ಯತೆ ಇಲ್ಲ, ಸಮಿತಿ ನಿರ್ಣಯಕ್ಕೆ ಮತ್ತು ಸಚಿವರ ಆದೇಶಕ್ಕೆ ಮಾನ್ಯತೆ ಇಲ್ಲ. ಆದ್ದರಿಂದ ಈ ವಿಷಯವನ್ನು ಹಕ್ಕುಚ್ಯುತಿಗೆ ಮಂಡಿಸಬೇಕು. ಇಷ್ಟೆಲ್ಲಾ ಆದೇಶ ಇದ್ದರೂ ಕೂಡ ಅವರನ್ನು ಪ್ರಾಜೆಕ್ಟ್‌ನಲ್ಲಿ ಮುಂದುವರೆಸಿಲ್ಲ, ಅದಕ್ಕಾಗಿ ಮುಖ್ಯಕಾರ್ಯದರ್ಶಿಯವರು ಈ ಸಮಿತಿಗೆ ಬರಬೇಕು,

ಈ ವಿಷಯವೊಂದನ್ನೇ ಚರ್ಚೆಗೆ ತೆಗೆದುಕೊಳ್ಳಬೇಕು. ಕಾರ್ಯದರ್ಶಿಯವರನ್ನು ಕೂಡ ಹಕ್ಕುಚ್ಯುತಿಗೆ ಒಳಪಡಿಸಬೇಕಾಗುತ್ತದೆ.

**ಪ್ರಧಾನ ಕಾರ್ಯದರ್ಶಿ (ಪ್ರ), ಗ್ರಾ.ಅ&ಪಂ.ರಾ. ಇಲಾಖೆ:-** ದಯಮಾಡಿ ನಮಗೆ ಮೂರು ವಾರಗಳ ಕಾಲಾವಕಾಶ ಕೊಡಿ, ನಾನು ಆಯುಕ್ತರನ್ನು ಮತ್ತು ಸಿ.ಇ.ಓ ರವರನ್ನು ಕರೆಸಿ ಈ ವಿಷಯದ ಬಗ್ಗೆ ಏನು ಕೋರ್ಟ್ ಆದೇಶವಾಗಿದೆ ಅದನ್ನೆಲ್ಲಾ ಪರಿಶೀಲನೆ ಮಾಡುತ್ತೇನೆ.

**ಅಧ್ಯಕ್ಷರು:-** ಈ ವಿಷಯದ ಬಗ್ಗೆ ಗೌರವಾನ್ವಿತ ಸದಸ್ಯರೆಲ್ಲರೂ ಗಂಟೆಗಟ್ಟಲೆ ಚರ್ಚೆ ಮಾಡಿದ್ದಾರೆ, ಅರ್ಜಿದಾರರಿಗೆ ಅನ್ಯಾಯವಾಗಿದ್ದರೆ ನ್ಯಾಯ ಸಿಗುತ್ತದೆ, ನಿಮ್ಮ ಹಿಂದಿನ ಅಧಿಕಾರಿಗಳು ಸಮಿತಿಗೆ ಬಂದಿದ್ದರು. ಇದರ ಬಗ್ಗೆ ಮತ್ತೆ ಮತ್ತೆ ಚರ್ಚೆಗಳಾಗಿದ್ದರೂ ತಾವು ಮಾಡುವುದಿಲ್ಲ ಎಂದರೆ ಈ ಸಮಿತಿಗೆ ಶೇಮ್ ಆಗುತ್ತದೆ. ನೋವುಂಡಿರುವ ಜನರಿದ್ದಾರೆ ಅದನ್ನು ನೀವೇಕೆ ಅರ್ಥ ಮಾಡಿಕೊಳ್ಳುತ್ತಿಲ್ಲ? ಇಲ್ಲಿ ಯಾರನ್ನೂ ದೂಷಣೆ ಮಾಡುವುದು ಸಭೆಯ ಉದ್ದೇಶವಲ್ಲ, ಮನಸ್ಸು ನೋಯಿಸುವ ಉದ್ದೇಶ ಇಲ್ಲ, ನೊಂದಿರುವವರಿಗೆ ನ್ಯಾಯ ಸಿಗಬೇಕಿದೆ.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ಪದವೀಧರರಾಗಿ ಕಡುಬಡವರು ಹಳ್ಳಿಗಳಲ್ಲಿ, ಹೋಬಳಿ ಮಟ್ಟಗಳಲ್ಲಿ ಕೆಲಸ ಮಾಡುತ್ತಾರೆ. ಅಂತಹವರಿಗೆ ಸಹಕಾರ ಕೊಡಿ ಎಂದರೆ, ಮಾನ್ಯ ಸರ್ವೋಚ್ಛ ನ್ಯಾಯಾಲಯಕ್ಕೆ ಹೋಗಲು ಅಡ್ವೋಕೇಟ್ ಜನರಲ್‌ರವರ ಅಭಿಪ್ರಾಯಕ್ಕೆ ಕಡತವನ್ನು ಕಳುಹಿಸಿದ್ದೇವೆ ಎಂದು ಉತ್ತರ ಕೊಡುತ್ತೀರಿ. ಅವರ ಮೇಲೆ ಗಧಾಪ್ರಹಾರ ಮಾಡುವುದೇ?

**ಶ್ರೀ ಮರಿತಿಬ್ಬೇಗೌಡ:-** ಮುಂದಿನ ಸಭೆಗೆ ಧಾರವಾಡ ಜಿಲ್ಲಾ ಪಂಚಾಯಿತಿಯ ಸಿ.ಇ.ಓ ರವರನ್ನೂ ಕರೆಸಿ.

**ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ:-** ಮುಂದಿನ ಸಭೆಗೆ ಮುಖ್ಯಕಾರ್ಯದರ್ಶಿಯವರು ಬರಲಿ ಅವರನ್ನೇ ಕೇಳೋಣ.

**ಅಧ್ಯಕ್ಷರು:-** ಬಾಯಿ ತಪ್ಪಿ ಹಾಗೆ ಹೇಳಿದ್ದಾರೆ ಅದನ್ನು ವಿತ್‌ಡ್ರಾ ಮಾಡಿ.

**Sri S.V. SANKANUR:** He has withdrawn it.

**ಪ್ರಧಾನ ಕಾರ್ಯದರ್ಶಿ (ಪ್ರ), ಗ್ರಾ.ಅ&ಪಂ.ರಾ. ಇಲಾಖೆ:-** ಅವರು ಅದನ್ನು ಬಾಯಿ ತಪ್ಪಿ ಹೇಳಿದ್ದಾರೆ, ಅದನ್ನು ರೆಕಾರ್ಡ್ ಮಾಡಬೇಡಿ.

(ಮುಂದು)

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಕೆಲಸ ಕಳೆದುಕೊಂಡಿರುವವರ ನೋವು ಅಧಿಕಾರಿಗಳಿಗೆ ತಿಳಿದಿದೆಯೇ? ಅವರುಗಳು ಕಡು ಬಿಸಲಿನಲ್ಲಿ ಕಷ್ಟಪಟ್ಟು ಹಳ್ಳಿಗಾಡು ಪ್ರದೇಶಗಳಲ್ಲಿ ಕೆಲಸ ಮಾಡುತ್ತಾರೆ. ಸರ್ವೋಚ್ಛ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸುವುದಾಗಿ ಅಧಿಕಾರಿಗಳು ತಿಳಿಸುತ್ತಾರೆ. ಇಲಾಖಾಧಿಕಾರಿಗಳು ಕಳೆದ ಸಭೆಯ ನಡವಳಿಗಳನ್ನು ಕೂಲಂಕುಷವಾಗಿ ನೋಡಿದ್ದಾರೆಯೇ?

**ಶ್ರೀ ಎಸ್.ವ್ಹಿ.ಸಂಕನೂರ:-** ನಾನು ಮತ್ತು ಶ್ರೀ ಚೌಡರೆಡ್ಡಿ ತೂಪಲ್ಲಿರವರು ಪದವೀಧರರ ಕ್ಷೇತ್ರವನ್ನು ಪ್ರತಿನಿಧಿಸುತ್ತೇವೆ. ಮಾನ್ಯ ಸದಸ್ಯರು ಪದವೀಧರರಿಗೆ ಸಂಬಂಧಪಟ್ಟಂತೆ ಇರುವ ಸಣ್ಣ ಕೆಲಸವನ್ನು ವಿಧಾನ ಪರಿಷತ್ತಿನ ಸದಸ್ಯರಾಗಿ ಮಾಡುವುದಕ್ಕಾಗಲಿಲ್ಲವೆಂದಾದರೆ, ಸದಸ್ಯತ್ವಕ್ಕೆ ರಾಜಿನಾಮೆ ಕೊಟ್ಟು ಹೋಗುವುದಾಗಿ ಮಾನ್ಯ ಸದಸ್ಯರು ಸದನದಲ್ಲಿ ಹೇಳಿದ್ದು ದಾಖಲೆಯಾಗಿದೆ.

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಸದಸ್ಯರುಗಳೆಲ್ಲರೂ ಈ ವಿಷಯದ ಬಗ್ಗೆ ಸಕಾರಾತ್ಮಕವಾಗಿ ಸದನದಲ್ಲಿ ಮಾತನಾಡಿದ್ದಾರೆ.

**ಅಧ್ಯಕ್ಷರು:-** ಯಾವುದೇ ವಿಚಾರವಾಗಿರಲೀ, ನ್ಯಾಯಯುತವಾಗಿದ್ದರೆ, ಅದನ್ನು ಮಾಡಲೇಬೇಕು.

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಕೆಲಸ ನೀಡುವ ಬಗ್ಗೆ ಸದನದಲ್ಲಿ ಚರ್ಚೆಯಾಗಿದೆ, ಸಂಬಂಧಪಟ್ಟ ಮಂತ್ರಿಗಳು ಹೇಳಿದ್ದಾರೆ ಹಾಗೂ ನ್ಯಾಯಾಲಯವೂ ಸಹ ತೀರ್ಪನ್ನು ನೀಡಿದೆ. ಆದರೂ ಸಹ ಅಧಿಕಾರಿಗಳು ಅವರನ್ನು ಇನ್ನೂ ಕೆಲಸಕ್ಕೆ ತೆಗೆದುಕೊಂಡಿಲ್ಲ. ಕೆಲಸದಿಂದ ತೆಗೆದುಹಾಕಿರುವವನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳಲಾಗಿದೆ ಎಂದು ಅಧಿಕಾರಿಗಳು ತಪ್ಪು ಮಾಹಿತಿಯನ್ನು ಸಮಿತಿಗೆ ನೀಡುತ್ತಾರೆ. ಈ ವಿಚಾರದಲ್ಲಿ ತಕ್ಷಣವೇ ತೀರ್ಮಾನವನ್ನು ತೆಗೆದುಕೊಳ್ಳಬೇಕು.

**ಶ್ರೀ ಮರಿತಿಬ್ಬೇಗೌಡ:-** ಇಲಾಖಾಧಿಕಾರಿಗಳು ತಮಗೆ ಬೇಕಾದ ಸಮಯದಲ್ಲಿ ಅವರನ್ನು ಕೆಲಸಕ್ಕೆ ತೆಗೆದುಕೊಂಡಿದ್ದಾರೆ. ಬೇಡವಾದ ಸಮಯದಲ್ಲಿ ಕೆಲಸದಿಂದ ತೆಗೆದುಹಾಕಿದ್ದಾರೆ. ಇಲಾಖಾಧಿಕಾರಿಗಳು ನ್ಯಾಯಾಲಯದ ಆದೇಶನ್ನು ಮಾನ್ಯ ಮಾಡುತ್ತಿಲ್ಲ.

**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ಈ ವಿಷಯವು ಅಂತಿಮ ತೀರ್ಮಾನದ ಹಂತದಲ್ಲಿದೆ. ಕಛೇರಿ ನಡವಳಿಗಳ ನಿಯಮಾನುಸಾರ ಕರ್ನಾಟಕ ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸಬೇಕೇ ಅಥವಾ ಬೇಡವೇ ಎಂಬುದರ ಬಗ್ಗೆ ಕಾನೂನು ಇಲಾಖೆಯ ಅಭಿಪ್ರಾಯವನ್ನು ಪಡೆಯಲಾಗಿದೆ. ಆದಾಗ್ಯೂ ಸಹ ಈ ವಿಷಯದ ಬಗ್ಗೆ ಕೂಲಂಕುಷವಾಗಿ ಪರಿಶೀಲಿಸಿ, ಅಂತಿಮ ತೀರ್ಮಾನವನ್ನು ತೆಗೆದುಕೊಳ್ಳುತ್ತೇವೆ.

**ಅಧ್ಯಕ್ಷರು:-** ಪ್ರಸ್ತುತ ವಿಷಯದಲ್ಲಿ ತೆಗೆದುಕೊಂಡ ಕ್ರಮದ ಬಗ್ಗೆ ಮುಂದಿನ ಸಭೆಯಲ್ಲಿ ತಿಳಿಸಿ.

**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ನ್ಯಾಯಾಲಯದ ಆದೇಶ ಪಾಲನೆಯಾಗಿಲ್ಲ ಎಂದು ಮೇಲ್ಮನವಿ ಸಲ್ಲಿಸಿದ್ದರು. ಹೀಗಾಗಿ ರಾಜ್ಯ ಉಚ್ಚ ನ್ಯಾಯಾಲಯವು ನಿರ್ದೇಶನ ನೀಡಿದೆ. ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರು ಕಾರ್ಯಕ್ರಮ ಯೋಜನೆಯ ಮಾರ್ಗಸೂಚಿಯನ್ವಯ ಸರ್ಕಾರೇತರ ಸಂಸ್ಥೆಗಳ / ಹೊರಗುತ್ತಿಗೆ ಸಂಸ್ಥೆಗಳ ಮುಖಾಂತರ ಬಿಆರ್‌ಸಿ/ಸಿಆರ್‌ಸಿಗಳ ಸೇವೆ ಮುಂದುವರೆಸುವ ವಿವೇಚನೆಯನ್ನು ಆಯಾ ಜಿಲ್ಲಾ ಪಂಚಾಯತಿಗಳಿಗೆ ನೀಡಲಾಗಿತ್ತು ಎಂಬ ಅಂಶವನ್ನು ನ್ಯಾಯಾಲಯವು ಮಾನ್ಯ ಮಾಡಿಲ್ಲ. ಹೀಗಾಗಿ ಉಚ್ಚ ನ್ಯಾಯಾಲಯದಲ್ಲಿ ಸಲ್ಲಿಸಿದ್ದ ಮೇಲ್ಮನವಿಯು ವಜಾಗೊಂಡಿರುತ್ತದೆ. This issue has almost reached its finality. As per, the procedure we have to consult the Law Department in this regard. We will do it and act accordingly. Later on, the same shall be intimated to the Committee.

**ಶ್ರೀ ಪಿ.ಆರ್.ರಮೇಶ್:-** ಭಾರತ ಸರ್ಕಾರದ ಕಡ್ಡಾಯ ನಿಯಮಗಳಲ್ಲಿ ಇದು ಒಂದಾಗಿದೆ.

**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ಭಾರತ ಸರ್ಕಾರವು ಕೇವಲ ಒಂದು ವರ್ಷದ ಅವಧಿಗೆ ಮಾತ್ರವೇ ನೀಡಿದ್ದಾರೆ. ನಂತರದಲ್ಲಿ ಬಿಆರ್‌ಸಿ/ಸಿಆರ್‌ಸಿಗಳ ಸೇವೆಗಳನ್ನು ಸರ್ಕಾರೇತರ ಸಂಸ್ಥೆಗಳ / ಹೊರಗುತ್ತಿಗೆ ಸಂಸ್ಥೆಗಳ ಮುಖಾಂತರ ತೆಗೆದುಕೊಳ್ಳಲು ತಿಳಿಸಲಾಗಿದೆ. ಹೀಗಾಗಿ ಇಲ್ಲಿ ಆ ಪ್ರಶ್ನೆ ಉದ್ಭವಿಸುವುದಿಲ್ಲ. ಆದರೂ ಸಹ ನಾವು ಅವರುಗಳ ಸೇವೆಯನ್ನು ಮುಂದುವರೆಸಿದ್ದೇವೆ. ಆದರೆ ಕೆಲವರು ಕೆಲಸದಿಂದ ತೆಗೆದುಹಾಕಿದ್ದು, ಅವರುಗಳನ್ನು ಸೇವೆಯಲ್ಲಿ ಮುಂದುವರೆಸದಿರುವ ಬಗ್ಗೆ ಮಾನ್ಯ ಸದಸ್ಯರು ಪ್ರಸ್ತಾಪ ಮಾಡುತ್ತಿದ್ದಾರೆ.

240

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಕೆಲಸದಿಂದ ತೆಗೆದುಹಾಕಿರುವವರ ಪೈಕಿ ಯಾರನ್ನೂ ಸಹ ಪುನಃ ಕೆಲಸಕ್ಕೆ ತೆಗೆದುಕೊಂಡಿಲ್ಲ. ಪೇಪರ್ ಮುಖೇನ ಕರೆದು, ರೋಸ್ಟರ್ ಪದ್ಧತಿಯನ್ವಯ ಯಾರನ್ನು ಕೆಲಸಕ್ಕೆ ತೆಗೆದುಕೊಳ್ಳಲಾಗಿದೆಯೋ ಅದೇ ಯೋಜನೆಯಲ್ಲಿ ಅವರುಗಳನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳಬೇಕು ಎನ್ನುವುದು ನಮ್ಮ ಅರ್ಜಿಯಲ್ಲಿನ ಮನವಿಯಾಗಿದೆ. ಇದೇ ವಿಷಯಕ್ಕೆ ಸಂಬಂಧಪಟ್ಟಂತೆ ನ್ಯಾಯಾಲಯಕ್ಕೆ ದಾವೆಯನ್ನು ಸಲ್ಲಿಸಲಾಗಿದೆ. ಸರ್ಕಾರಿ ಆದೇಶವೂ ಸಹ ಇದನ್ನೇ ಪುಷ್ಟೀಕರಿಸುತ್ತದೆ. ಆದರೆ ಆ ರೀತಿಯಾಗಿ ಅವರುಗಳನ್ನು ಪುನಃ ಕೆಲಸಕ್ಕೆ ತೆಗೆದುಕೊಂಡಿಲ್ಲ. ಈ ಹಿಂದೆ ಮಾಡಿದ ರೀತಿಯಲ್ಲಿಯೇ ಅವರುಗಳನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವುದಾಗಿ ಇಲಾಖೆಯು ತಿಳಿಸಿದರೆ, ನಮ್ಮ ಅಭ್ಯಂತರವೇನೂ ಇಲ್ಲ.

**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ನ್ಯಾಯಾಲಯದ ಆದೇಶ ಹಾಗೂ ಸಂಬಂಧಪಟ್ಟ ಕಡತವನ್ನು ನಾನು ಪುನಃ ಪರಿಶೀಲಿಸುತ್ತೇನೆ. ಸರ್ಕಾರದ ಮುಖ್ಯ ಕಾರ್ಯದರ್ಶಿಗಳಿಗೂ ಸಹ ಕಡತವನ್ನು ರವಾನಿಸಲಾಗುವುದು. ಹಿಂದಿನ ಸಮಿತಿ ಸಭೆಯಲ್ಲಿ ನಾನು ಹಾಜರಿದ್ದೇನು. ಎಲ್ಲರಿಗೂ ಸಹ ಈ ಸಂಗತಿಗಳೆಲ್ಲವೂ ತಿಳಿದಿವೆ.

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಈ ಹಿಂದೆ ಮಾನ್ಯ ಹೆಚ್.ಕೆ.ಪಾಟೀಲ್‌ರವರು ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಮಂತ್ರಿಗಳಾಗಿದ್ದಾಗ ಆದೇಶ ಮಾಡಿದ್ದಾಗ, ಅವರುಗಳನ್ನು ಪುನಃ ಕೆಲಸಕ್ಕೆ ತೆಗೆದುಕೊಂಡಿಲ್ಲ.

**ಶ್ರೀ ಮರಿತಿಬ್ಬೇಗೌಡ:-** ಒಂದು ವಾರದೊಳಗಾಗಿ ಕೆಲಸದಿಂದ ತೆಗೆದು ಹಾಕಿರುವವನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವ ಬಗ್ಗೆ ಇಲಾಖೆಯು ಆದೇಶ ನೀಡುತ್ತದೆಯೇ?

**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ನಮಗೆ ಸಮಯಾವಕಾಶ ನೀಡಿ.

**ಶ್ರೀ ಮರಿತಿಬ್ಬೇಗೌಡ:-** ಇಲಾಖೆಯ ಕಾರ್ಯದರ್ಶಿಗಳು ಯಾವುದನ್ನು ಪರಿಶೀಲನೆ ಮಾಡುತ್ತಾರೆಯೋ ಮಾಡಲಿ. ಆದರೆ, ಮುಂದಿನ ವಾರದ ಸಮಿತಿ ಸಭೆಗೆ ರಾಜ್ಯದ ಮುಖ್ಯ ಕಾರ್ಯದರ್ಶಿಗಳನ್ನು ಕರೆಸೋಣ. ಅವರೇ ಈ ವಿಚಾರವಾಗಿ ಉತ್ತರವನ್ನು ನೀಡಲಿ. ಈ ವಿಷಯವನ್ನು ಹಕ್ಕುಚ್ಯುತಿ ಎಂಬುದಾಗಿ ಮಂಡಿಸಿ.

239

**ಅಧ್ಯಕ್ಷರು:-** ನಮ್ಮ ಕೆಲಸಗಳು ಸುಲಭವಾಗಿ ಆಗುವ ರೀತಿಯಲ್ಲಿ ಮಾಡಬೇಕು. 8-10 ದಿನಗಳಲ್ಲಿ ಪ್ರಕ್ರಿಯೆಯನ್ನು ಪೂರ್ಣ ಮಾಡುವುದಕ್ಕಾಗುವುದಿಲ್ಲವೇ?

**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ನಮಗೆ ಹೆಚ್ಚಿನ ಸಮಯ ಬೇಕು.

**ಶ್ರೀ ಮರಿತಿಬ್ಬೇಗೌಡ:-** ಇಲಾಖಾಧಿಕಾರಿಗಳು ಈ ವಿಚಾರವನ್ನು ಪರಿಶೀಲನೆ ಮಾಡುವುದಾಗಿ ಹೇಳುತ್ತಿದ್ದಾರೆಯೇ ಹೊರತು ಕೆಲಸದಿಂದ ತೆಗೆದುಹಾಕಿರುವವರನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವುದಾಗಿ ಹೇಳುತ್ತಿಲ್ಲ. ವಿಷಯವನ್ನು ಪರಿಶೀಲಿಸುವುದರಿಂದ ಇವತ್ತಿನ ದಿವಸ ಈ ಪರಿಸ್ಥಿತಿ ನಿರ್ಮಾಣವಾಗಿದೆ.

**ಅಧ್ಯಕ್ಷರು:-** ಈಗಾಗಲೇ ತಪ್ಪಾಗಿರುವುದನ್ನು ಸರಿಪಡಿಸಿಕೊಳ್ಳುತ್ತೇವೆ ಎನ್ನುವುದು ಇಲಾಖಾಧಿಕಾರಿಗಳ ಮಾತ್ತಿನ್ನ ಅರ್ಥವಾಗಿದೆ. ಅವರಿಗೆ ತಮ್ಮ ತಪ್ಪಿನ ಮನವರಿಕೆಯಾಗಿದೆ.

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಕೆಲಸದಿಂದ ತೆಗೆದುಹಾಕಿರುವವರನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವ ಬಗ್ಗೆ ಸರ್ಕಾರ ಹಾಗೂ ನ್ಯಾಯಾಲಯ ಆದೇಶ ಹೊರಡಿಸಿವೆ. ಇದಕ್ಕೆ ಪೂರಕವಾಗುವಂತೆ ನಮ್ಮ ಸಮಿತಿಯು ನಿರ್ದೇಶನ ನೀಡಿದೆ. ಇಷ್ಟಾದರೂ ಸಹ ಅವರುಗಳನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವುದಕ್ಕೆ ಇನ್ನು ಯಾವುದರ ಅವಶ್ಯಕತೆ ಇದೆ?

**ಶ್ರೀ ಮರಿತಿಬ್ಬೇಗೌಡ:-** ಇಲಾಖಾಧಿಕಾರಿಗಳು ಯಾವುದೇ ಆದೇಶವನ್ನು ಸರಿಯಾಗಿ ಓದಿಲ್ಲ. ಅದರಲ್ಲಿನ ಅಂಶಗಳನ್ನು ತಿಳಿದುಕೊಂಡಿಲ್ಲ. ಹೀಗಾಗಿ ಇಲಾಖಾಧಿಕಾರಿಗಳು ಈಗ ಸಮಿತಿಯ ಮುಂದೆ ಸರಿಯಾಗಿ ಉತ್ತರಿಸುತ್ತಿಲ್ಲ.

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಸರ್ಕಾರ, ನ್ಯಾಯಾಲಯ ಹಾಗೂ ಸಮಿತಿ ಇವುಗಳನ್ನು ಹೊರತು ಪಡಿಸಿ, ಇನ್ಯಾವ ಸಕ್ಷಮ ಪ್ರಾಧಿಕಾರ ಹೇಳಿದರೆ, ನೀವು ಅವರುಗಳನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುತ್ತೀರಿ? ಒಂದು ವೇಳೆ ನೀವೇ ಕೆಲಸ ಕಳೆದುಕೊಂಡಿರುವವರ ಸ್ಥಾನದಲ್ಲಿದ್ದಿದ್ದರೆ ನಿಮ್ಮ ಪರಿಸ್ಥಿತಿ ಯಾವ ರೀತಿಯಾಗಿ ಇರುತ್ತಿತ್ತು?

ಶ್ರೀ ಮರಿತಿಬ್ಬೇಗೌಡ:- ಇಲಾಖಾಧಿಕಾರಿಗಳು ನಮ್ಮ ಸಮಿತಿಯ ನಿರ್ಣಯಕ್ಕೆ, ನ್ಯಾಯಾಲಯದ ಆದೇಶಕ್ಕೆ ಯಾವ ರೀತಿಯಾಗಿ ಮನ್ನಣೆ ನೀಡಿ ಕರ್ತವ್ಯ ನಿರ್ವಹಿಸುತ್ತಿರುವುದು ರಾಜ್ಯದ ಮುಖ್ಯ ಕಾರ್ಯದರ್ಶಿಗಳಿಗೆ ತಿಳಿಯಲಿ. ಹೀಗಾಗಿ ಮುಂದಿನ ವಾರದ ಸಭೆಗೆ ಮುಖ್ಯ ಕಾರ್ಯದರ್ಶಿಗಳನ್ನು ಕರೆಸಿ. ಅವತ್ತಿನ ಬೇರೆ ವಿಷಯಗಳನ್ನು ತೆಗೆದುಕೊಳ್ಳುವುದು ಬೇಡ. ಇದೇ ಒಂದು ವಿಷಯವನ್ನು ಮಾತ್ರವೇ ಸಭೆಯಲ್ಲಿ ಪ್ರಸ್ತಾಪಿಸೋಣ. ಅಲ್ಲಿಯವರೆಗೆ ಇಲಾಖೆಯ ಕಾರ್ಯದರ್ಶಿಗಳು ಈ ವಿಷಯದ ಬಗ್ಗೆ ಹೆಚ್ಚು ಪರಿಶೀಲನೆ ಮಾಡಲಿ.

ಅಧ್ಯಕ್ಷರು:- ಇಲಾಖಾಧಿಕಾರಿಗಳಿಗೆ 15 ದಿನಗಳ ಕಾಲಾವಕಾಶವನ್ನು ನೀಡುವುದಕ್ಕಾಗುವುದಿಲ್ಲ. ಏಕೆಂದರೆ, ಹೊಸ ಕಾನೂನು ಜಾರಿಗೆ ಬಂದರೆ, ಕೆಲಸದಿಂದ ತೆಗೆದು ಹಾಕಿರುವವರನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳುವುದಕ್ಕಾಗುವುದಿಲ್ಲ. ಹೀಗಾಗಿ ನಮ್ಮ ಸಮಿತಿಯ ಸದಸ್ಯರುಗಳೆಲ್ಲರೂ ಸಮ್ಮತಿಸಿದ್ದಲ್ಲಿ ಇಲಾಖಾಧಿಕಾರಿಗಳಿಗೆ ಸಮಿತಿ ನಿರ್ದೇಶನವನ್ನು ಜಾರಿಗೊಳಿಸಲು 10 ದಿನಗಳ ಕಾಲಾವಕಾಶವನ್ನು ನೀಡೋಣ. ನ್ಯಾಯಾಲಯದ ಆದೇಶವನ್ನು ಜಾರಿಗೊಳಿಸುವುದಾಗಿ ಇಲಾಖಾಧಿಕಾರಿಗಳು ಹೇಳುತ್ತಿದ್ದಾರೆ.

ಶ್ರೀ ಮರಿತಿಬ್ಬೇಗೌಡ:- ಸಮಿತಿ ನಿರ್ಣಯ, ನ್ಯಾಯಾಲಯದ ಆದೇಶಗಳನ್ನು ಜಾರಿಗೊಳಿಸುವುದಾಗಿ ಈ ಹಿಂದಿನ ಸಭೆಯಲ್ಲಿ ಇಲಾಖಾಧಿಕಾರಿಗಳು ಒಪ್ಪಿಕೊಂಡಿದ್ದಾರೆ. ಸದರಿ ನ್ಯಾಯಾಲಯದ ಆದೇಶದ ವಿರುದ್ಧ ರಾಜ್ಯ ಉಚ್ಚ ನ್ಯಾಯಾಲಯವು ಮತ್ತೊಂದು ಆದೇಶವನ್ನು ನೀಡಿದೆ. ಅದನ್ನು ಜಾರಿಗೊಳಿಸುವುದಾಗಿ ಇಲಾಖಾಧಿಕಾರಿಗಳು ಹೇಳುತ್ತಿದ್ದಾರೆ.

ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:- ಮಾನವೀಯತೆಯ ದೃಷ್ಟಿಯಿಂದ ಇಲಾಖೆಯು ಈಗಾಗಲೇ ಕೆಲಸದಿಂದ ತೆಗೆದುಹಾಕಿರುವವರನ್ನು ಪುನಃ ಕೆಲಸಕ್ಕೆ ತೆಗೆದುಕೊಳ್ಳಬೇಕು. ಆದರೆ, ಇಲಾಖೆಯವರು ರಾಜ್ಯ ಉಚ್ಚ ನ್ಯಾಯಾಲಯದ ಆದೇಶದ ವಿರುದ್ಧ ಸರ್ವೋಚ್ಚ ನ್ಯಾಯಾಲಯದಲ್ಲಿ ಮೇಲ್ಮನವಿ ಸಲ್ಲಿಸುವುದಾಗಿ ಹೇಳುತ್ತಿದ್ದಾರೆ.

ಉಪ ಕಾರ್ಯದರ್ಶಿ (ಆಡಳಿತ), ಗ್ರಾಕು.ನೀ. ಮತ್ತು ನೈ. ಇಲಾಖೆ:- ರಾಷ್ಟ್ರೀಯ ಗ್ರಾಮೀಣ ಕುಡಿಯುವ ನೀರು ಕಾರ್ಯಕ್ರಮ ಯೋಜನೆಯ ಮಾರ್ಗಸೂಚಿಗಳನ್ನು ಎಲ್ಲಾ ರಾಜ್ಯ ಸರ್ಕಾರಗಳು ಪಾಲಿಸಬೇಕು. ಇದರಲ್ಲಿ ಸರ್ಕಾರೇತರ ಸಂಸ್ಥೆಗಳ/ಹೊರಗುತ್ತಿಗೆ ಸಂಸ್ಥೆಗಳ ಮುಖಾಂತರ ಬಿಆರ್‌ಸಿ/ಸಿಆರ್‌ಸಿಗಳ ಸೇವೆ ಮುಂದುವರೆಸುವ ವಿವೇಚನೆಯನ್ನು ಆಯಾ ಜಿಲ್ಲಾ ಪಂಚಾಯತಿಗಳಿಗೆ ನೀಡಲಾಗಿರುವುದನ್ನು ಸ್ಪಷ್ಟವಾಗಿ ತಿಳಿಸಲಾಗಿದೆ.

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಯೋಜನೆಯ ಮಾರ್ಗಸೂಚಿಗಳಿಗಿಂತ ನಮ್ಮ ರಾಜ್ಯ ಸರ್ಕಾರದ ಆದೇಶವೇ ಸರ್ವೋಚ್ಚವಾಗಿದೆ. ಇದೇ ವಿಷಯವಾಗಿ ಚರ್ಚೆ ಮಾಡಲಾಗಿದೆ.

**ಉಪ ಕಾರ್ಯದರ್ಶಿ (ಆಡಳಿತ), ಗ್ರಾಕು.ನೀ. ಮತ್ತು ನೈ. ಇಲಾಖೆ:-** ಇದು ಕೇಂದ್ರ ಸರ್ಕಾರದ ಯೋಜನೆಯಾಗಿದ್ದು, ಸರ್ಕಾರೇತರ ಸಂಸ್ಥೆಗಳ/ಹೊರಗುತ್ತಿಗೆ ಸಂಸ್ಥೆಗಳ ಮುಖಾಂತರ ಬಿಆರ್‌ಸಿ/ಸಿಆರ್‌ಸಿಗಳ ಸೇವೆಗಳನ್ನು ತೆಗೆದುಕೊಳ್ಳಬೇಕೆಂದು ಬಹಳ ಸ್ಪಷ್ಟವಾಗಿ ತಿಳಿಸಲಾಗಿದೆ.

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ಹಾಗಿದ್ದರೆ, ಈ ಮೊದಲು ನೀವು ಮಾರ್ಗಸೂಚಿಗಳ ವಿರುದ್ಧವಾಗಿ ಪೇಪರ್ ಮುಖಾಂತರ ಆಹ್ವಾನಿಸಿ, ರೋಸ್ಟರ್ ಪದ್ಧತಿಯನ್ವಯ ಏಕೆ ಕೆಲಸಕ್ಕೆ ತೆಗೆದುಕೊಳ್ಳಲಾಗಿದೆ?

**ಶ್ರೀ ಪಿ.ಆರ್.ರಮೇಶ್:-** ಇಲಾಖೆಯ ಕಾರ್ಯದರ್ಶಿಗಳು, ಸಮಿತಿಯ ಹಿಂದಿನ ಸಭೆಯ ನಡವಳಿಗಳನ್ನು ಅವಲೋಕಿಸಿ. ನಡವಳಿಯ ನಂತರ ಪ್ರಸ್ತುತ ಆದೇಶ ಮಾಡಲಾಗಿದೆ. ಇವುಗಳನ್ನು ಕೂಲಂಕುಷವಾಗಿ ಪರಿಶೀಲಿಸಿ, ಈ ಸಮಸ್ಯೆಯನ್ನು ಯಾವ ರೀತಿಯಾಗಿ ಬಗೆಹರಿಸಬಹುದೆಂಬ ಪರಿಹಾರದೊಂದಿಗೆ ಮುಂದಿನ ಸಭೆಗೆ ಹಾಜರಾಗಲಿ. This scheme is only for certain period...

**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ಈ ವಿಚಾರವು ನನಗೆ ತಿಳಿದಿದೆ. ನಾವು ಈ ಹಿಂದೆ ಬಹಳಷ್ಟು ಒಳ್ಳೆಯ ಕೆಲಸಗಳನ್ನು ಮಾಡಿದ್ದೇವೆ. ಆದರೂ ಸಹ ಮಾನ್ಯ ಸದಸ್ಯರು ನಮಗೆ ಹೀಗೇಕೆ ಹೇಳುತ್ತಿದ್ದಾರೆ?

**ಶ್ರೀ ಆರ್.ಚೌಡರೆಡ್ಡಿ ತೂಪಲ್ಲಿ:-** ನಾನು ಈ ವಿಚಾರದಲ್ಲಿ ಮನವಿ ಮಾಡಿಕೊಳ್ಳುತ್ತಿದ್ದೇನೆ. ಸರ್ಕಾರದ ನಿರ್ಧಾರದಿಂದಾಗಿ ಸುಮಾರು 900 ಜನರು ಬೀದಿ ಪಾಲಾಗಿದ್ದಾರೆ.

**Sri P.R.RAMESH:-** Take up 15 days of time and do come up with a good suggestion in this regard.

ಶ್ರೀ ಮರಿತಿಬ್ಬೇಗೌಡ:- ಈ ವಿಚಾರದಲ್ಲಿ ನನ್ನ ಸಹಮತಿ ಇಲ್ಲ. ಮುಂದಿನ ವಾರದ ಸಭೆಗೆ ರಾಜ್ಯದ ಮುಖ್ಯ ಕಾರ್ಯದರ್ಶಿಗಳನ್ನು ಕರೆಸಿ.

**Mr CHAIRMAN:** - Must and should 15 ದಿನದೊಳಗಾಗಿ ಇಲಾಖಾಧಿಕಾರಿಗಳು ಸೂಕ್ತ ಕ್ರಮಗಳನ್ನು ತೆಗೆದುಕೊಳ್ಳಬೇಕು.

ಶ್ರೀ ಪಿ.ಆರ್.ರಮೇಶ್:- ಅಧ್ಯಕ್ಷರು ನಿರ್ದಿಷ್ಟ ಸಮಯವನ್ನು ನಿಗದಿಪಡಿಸಲಿ.

(ಪ್ರಸ್ತುತ ಅರ್ಜಿಯ ವಿಚಾರಣೆಯನ್ನು ಬಾಕಿಯಿರಿಸಲು ಸಮಿತಿಯು ತೀರ್ಮಾನಿಸಿತು)

ಅರ್ಜಿ ಸಂಖ್ಯೆ: 108/2015

ವಿಷಯ:- ರಾಮನಗರ ಜಿಲ್ಲೆ ಮಾಗಡಿ ತಾಲ್ಲೂಕು ಕಸಬಾ ಹೋಬಳಿಯಲ್ಲಿನ ತಿಪ್ಪಗೊಂಡನಹಳ್ಳಿ ಸೇತುವೆಯಿಂದ ಸಿಂಗದಾಸನಹಳ್ಳಿಯವರೆಗೆ ಕಚ್ಚಾ ರಸ್ತೆ ಅಗಲೀಕರಣ ಹಾಗೂ ಡಾಂಬರೀಕರಣದ ಬಗ್ಗೆ

* * *

ಮುಖ್ಯ ಕಾರ್ಯನಿರ್ವಹಣಾಧಿಕಾರಿ, ರಾಮನಗರ:- ರಸ್ತೆ ಕಾಮಗಾರಿಯನ್ನು 59 ಲಕ್ಷ ರೂಪಾಯಿಗಳ ಅನುದಾನದಲ್ಲಿ ಕೈಗೊಳ್ಳಲು ಈಗಾಗಲೇ ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ. ಸದರಿ ರಸ್ತೆಯ ಉದ್ದ 1060 ಮೀಟರ್‌ಗಳು ಹಾಗೂ ಅಗಲ 6 ಮೀಟರ್‌ಗಳು. Formation level ಈಗಾಗಲೇ ಅಭಿವೃದ್ಧಿಯಾಗಿದೆ. 200 ಮೀಟರ್ ರಸ್ತೆಗೆ ಸ್ವಲ್ಪ ವ್ಯಾಜ್ಯ ಇರುವುದರಿಂದಾಗಿ ನಾನು ಮತ್ತು ತಹಸೀಲ್ದಾರ್ ಸ್ಥಳ ಪರಿಶೀಲನೆ ಮಾಡಿದ್ದು, ಅದು ನದಿ ದಡದ ಹತ್ತಿರದಲ್ಲಿರುವುದರಿಂದ ಒತ್ತುವರಿಯಾಗಿರಬಹುದೆಂಬ ಸಂಶಯವಿರುವುದರಿಂದ, ಸದರಿ ಸ್ಥಳದ ಸರ್ವೇ ಮಾಡಿ, ನಕ್ಷೆಯನ್ನು ನೀಡುವಂತೆ ತಿಳಿಸಲಾಗಿದೆ.

ಅಧ್ಯಕ್ಷರು:- ಪ್ರಶ್ನಿತ ಕಾಮಗಾರಿಗೆ ಸರ್ಕಾರದಿಂದ ಹಣ ಬಿಡುಗಡೆಯಾಗಿದೆಯೇ?

235



**ಪ್ರಧಾನ ಕಾರ್ಯದರ್ಶಿ, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ:-** ಸರ್ಕಾರದಿಂದ ಈಗಾಗಲೇ ಹಣ ಬಿಡುಗಡೆಯಾಗಿದ್ದು, ಭಾಗಶಃ ರಸ್ತೆ ಅಗಲೀಕರಣ ಕಾಮಗಾರಿಯು ಪೂರ್ಣಗೊಂಡಿದೆ. ರಸ್ತೆ ಅಗಲೀಕರಣಕ್ಕಾಗಿ ಭೂ ಸ್ವಾಧೀನ ಪಡಿಸಿಕೊಂಡರೆ, ಪರಿಹಾರ ಮೊತ್ತ ನೀಡಬೇಕೆಂದು ಭೂ ಮಾಲೀಕರು ಕೋರುತ್ತಿದ್ದಾರೆ. ಈ ವಿಚಾರವಾಗಿ ಸಭೆಯನ್ನು ಮಾಡಲಾಗಿದೆ. ಒಂದು ಬಾರಿ ಒಬ್ಬರಿಗೆ ಭೂ ಪರಿಹಾರ ನೀಡಿದರೆ, ಬೇರೆಯವರು ಕೇಳುತ್ತಾರೆ ಹಾಗೂ ಸದರಿ ಸ್ಥಳವು ಒತ್ತುವರಿಯಾಗಿರುವ ಸಾಧ್ಯತೆಗಳಿರುತ್ತವೆ ಎನ್ನುವ ಕಾರಣಕ್ಕಾಗಿ ಜಿಲ್ಲಾಧಿಕಾರಿಗಳ ಸಹಕಾರದೊಂದಿಗೆ ಅಲ್ಲಿನ ಸ್ಥಳವನ್ನು ಪುನಃ ಸರ್ವೇ ಮಾಡಿ ಪರಿಶೀಲನೆ ಮಾಡಲು ತಿಳಿಸಲಾಗಿದೆ.

**ಅಧ್ಯಕ್ಷರು:-** ಕಾಮಗಾರಿಯನ್ನು ಇನ್ನು ಎಷ್ಟು ದಿನದಲ್ಲಿ ಪೂರ್ಣಗೊಳಿಸಲಾಗುವುದು?

**ಮುಖ್ಯ ಕಾರ್ಯನಿರ್ವಹಣಾಧಿಕಾರಿ, ರಾಮನಗರ:-** ಅಲ್ಲಿನ ಸಮಸ್ಯೆ ಬಗೆಹರಿದ ಕೂಡಲೇ ಕಾಮಗಾರಿಯನ್ನು ಪೂರ್ಣಗೊಳಿಸಲಾಗುವುದು.

**Sri P.R.RAMESH:-** Is it downstream reservoir or upstream reservoir?

**CEO, RAMANAGARA:-** It is a downstream reservoir.

**ಶ್ರೀ ಮರಿತಿಬ್ಬೇಗೌಡ:-** ಎಷ್ಟು ಸಮಯದಲ್ಲಿ ಸ್ಥಳದ ಸರ್ವೇ ಮಾಡಿಸಿ, ವರದಿಯನ್ನು ನೀಡಲಾಗುವುದು?

**ಶ್ರೀ ಪಿ.ಆರ್.ರಮೇಶ್:-** ನೀರಾವರಿ ಇಲಾಖೆಯವರು ಸ್ವಚ್ಛಗೊಳಿಸುತ್ತಾರೆ. ಇವರ ಅಭಿಪ್ರಾಯವನ್ನು ಪಡೆಯಲಾಗಿದೆಯೇ? ತಿಪ್ಪಗೊಂಡನಹಳ್ಳಿ ಕೆರೆಗೆ catchment area ನಲ್ಲಿ buffer zone ಎಂಬುದಾಗಿ ಇದ್ದು, ಸರ್ವೋಚ್ಚ ನ್ಯಾಯಾಲಯದ ಹಸಿರು ಪೀಠದ ಆದೇಶದಂತೆ, ಅದನ್ನು ಗುರ್ತಿಸಲಾಗಿದೆಯೇ? In order to restore the lakes, ಯಾವ ರೀತಿಯಾಗಿ ಸ್ಥಳವನ್ನು ಮೀಸಲಿಡಬೇಕೆಂದು ತಿಳಿಸಲಾಗಿದೆ. ಹೆಚ್ಚುವರಿ ನೀರನ್ನು ಬಿಡಲು ಸರ್ಕಾರವು ಈಗಾಗಲೇ ಹಲವಾರು ಕ್ರಮಗಳನ್ನು ತೆಗೆದುಕೊಂಡಿದೆ. ರಸ್ತೆ ನಿರ್ಮಾಣ ಅಥವಾ ಅಗಲೀಕರಣದಿಂದಾಗಿ ಮುಂದಿನ

## ಕಡತದ ವಿವರಗಳು

ಕಂಪ್ಯೂಟರ್ ಕಡತ ಸಂಖ್ಯೆ: 121223

ಕಡತ ಸಂಖ್ಯೆ : ಗ್ರಾಅಪ 69 ಗ್ರಾನೀಸ2 201516

ವಿಷಯ: BRC/CRcಗಳ ನೇಮಕಾತಿ

ಈ ಕಡತವನ್ನು ಸೃಷ್ಟಿಸಿದ ಶಾಖೆ ಮತ್ತು ಹುದ್ದೆ: Additional Chief Secretary ,Additional Chief Secretary

ಕಡತದ ವರ್ಗ Others

ಕಡತದ ವಿಧ Single File

ತೆರೆದಿದ್ದು 03/07/2019

ಕಡತದಲ್ಲಿನ ಪತ್ರಗಳನ್ನು ವೀಕ್ಷಿಸಿ ಲಗತ್ತಿಸಲಾದ ಕಡತಗಳನ್ನು ವೀಕ್ಷಿಸಿ

## ಕಡತದ ಚಲನ-ವಲನದ ಇತಿಹಾಸ

| | | | | | | | | |
|---|---|---|---|---|---|---|---|---|
| RDPR Department | Additional Chief Secretary | Additional Chief Secretary | RDPR Department | Additional Chief Secretary | Additional Chief Secretary | 28/08/2019 | File Moved To Field Department | File Closed |
| RDPR Department | Rural Water Supply | Director | RDPR Department | Additional Chief Secretary | Additional Chief Secretary | 28/08/2019 | File Rejected | Acknowledged |
| RDPR Department | Rural Water Supply | Director | RDPR Department | Additional Chief Secretary | Additional Chief Secretary | 28/08/2019 | File Rejected | In Transit |
| RDPR Department | Additiaonal Chief Secretary | Additional Chief Secretary | RDPR Department | Rural Water Supply | Directar | 28/08/2019 | File Rejected | Rejected |
| RDPR Department | Additional Chief Secretary | Additional Chief Secretary | RDPR Department | Rural Water Supply | Director | 07/08/2019 | For Necessary Action | In Transit |
| Law Department | Section Officer Opinion | Section Officer Opinion | RDPR Department | Additional Chief Secretary | Additional Chief Secretary | 07/08/2019 | For Necessary Action | Acknowledged |
| Law Department | Section Officer Opinion | Section Officer Opinion | RDPR Department | Additional Chief Secretary | Additional Chief Secretary | 03/08/2019 | For Necessary Action | In Transit |
| Law Department | Deputy SecretaryII Opinion | Deputy SecretaryII Opinion | Law Department | Section Officer Opinion | Section Officer Opinion | 03/08/2019 | ಅಗತ್ಯ ಕ್ರಮಕ್ಕಾಗಿ | Acknowledged |
| Law Department | Deputy SecretaryII Opinion | Deputy SecretaryII Opinion | Law Department | Section Officer Opinion | Section Officer Opinion | 03/08/2019 | ಅಗತ್ಯ ಕ್ರಮಕ್ಕಾಗಿ | In Transit |
| Law Department | Special Secretary | Special Secretary | Law Department | Deputy SecretaryII Opinion | Deputy SecretaryII Opinion | 03/08/2019 | ಅಗತ್ಯ ಕ್ರಮಕ್ಕಾಗಿ | Acknowledged |
| Law Department | Special Secretary | Special Secretary | Law Department | Deputy SecretaryII Opinion | Deputy SecretaryII Opinion | 02/08/2019 | ಅಗತ್ಯ ಕ್ರಮಕ್ಕಾಗಿ | In Transit |
| Law Department | Deputy SecretaryII Opinion | Deputy SecretaryII Opinion | Law Department | Special Secretary | Special Secretary | 02/08/2019 | ಅಗತ್ಯ ಕ್ರಮಕ್ಕಾಗಿ | Acknawledged |
| Law Department | Deputy SecretaryII Opinion | Deputy SecretaryII Opinion | Law Department | Special Secretary | Special Secretary | 31/07/2019 | ಅಗತ್ಯ ಕ್ರಮಕ್ಕಾಗಿ | In Transit |
| Law Department | Section Officer Opinion | Section Officer Opinion | Law Department | Deputy SecretaryII Opinion | Deputy SecretaryII Opinion | 31/07/2019 | For Necessary Action | Acknowledged |
| Law Department | Section Officer Opinion | Section Officer Opinian | Law Department | Deputy SecretaryII Opinion | Deputy SecretaryII Opinion | 11 07/2019 | For Necessary Action | In Transit |
| Law Department | Principal Secretary Law | Principal Secretary Law | Law Department | Section Officer Opinion | Section Officer Opinion | 06/07/2019 | For Necessary Action | Acknowledged |
| Law Department | Principal Secretary Law | Principal Secretary Law | Law Department | Section Officer Opinion | Section Officer Opinion | 06/07/2019 | For Necessary Action | In Transit |
| RDPR Department | Additional Chief Secretary | Additional Chief Secretary | Law Department | Principal Secretary Law | Principal Secretary Law | 06/07/2019 | For Necessary Action | Acknowledged |
| RDPR Department | Additional Chief Secretary | Additional Chief Secretary | Law Department | Principal Secretary Law | Principal Secretary Law | 03/07/2019 | For Necessary Action | In Transit |
| RDPR Department | Additional Chief Secretary | Additional Chief Secretary | RDPR Department | Additional Chief Secretary | Additional Chief Secretary | 03/07/2019 | File Created | Fila Created |



ಕರ್ನಾಟಕ ಸರ್ಕಾರ

ಕರ್ನಾಟಕ ರಾಜ್ಯ ನೀರು ಮತ್ತು ನೈರ್ಮಲ್ಯ ಮಿಷನ್, ಬೆಂಗಳೂರು

ದಿನಾಂಕ: 04/04/2011

[redacted]

**ಗ್ರಾಮೀಣ ನೀರು ಮತ್ತು ನೈರ್ಮಲ್ಯ ಯೋಜನೆಯ ಅಡಿಯಲ್ಲಿ**
**ಕ್ಲಸ್ಟರ್ (ಹೋಬಳಿ)/ ಬ್ಲಾಕ್ (ತಾಲ್ಲೂಕು) ಮಟ್ಟದಲ್ಲಿನ ತಾತ್ಕಾಲಿಕ ಸಂಯೋಜಕರ ಹುದ್ದೆಗಳಿಗೆ ವೈಯಕ್ತಿಕ ಸಮಾಲೋಚಕರಾಗಿ ಕೆಲಸ ನಿರ್ವಹಿಸಲು ಅರ್ಜಿ ಸಲ್ಲಿಸುವ ಕುರಿತು**
**(ಜಿಲ್ಲಾ ಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮ ಪಂಚಾಯಿತಿಗಳ ಸೂಚನಾ ಫಲಕಗಳಲ್ಲಿ ಪ್ರಕಟಿಸುವುದು)**

........................................ತಾಲ್ಲೂಕು ........................................ ಜಿಲ್ಲೆ

ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯ ಅಧೀನದಲ್ಲಿ, ಕೇಂದ್ರ ಸರ್ಕಾರದ ನೆರವಿನ ಗ್ರಾಮೀಣ ನೀರು ಮತ್ತು ನೈರ್ಮಲ್ಯ ಯೋಜನೆಯಡಿ ಕ್ಲಸ್ಟರ್ (ಹೋಬಳಿ) ಮಟ್ಟದಲ್ಲಿ ಕುಡಿಯುವ ನೀರಿನ ಯೋಜನೆಗಳಿಗೆ ಸಂಬಂಧಿಸಿದ ನೀರಿನ ಗುಣಮಟ್ಟ ಪರೀಕ್ಷೆ, ಅವುಗಳದಾಖಲಾತಿ ಹಾಗು ಗ್ರಾಮಗಳಲ್ಲಿ ಸಾಮಾಜಿಕ ಅಭಿವೃದ್ಧಿ ಚಟುವಟಿಕೆಗಳನ್ನು ನಿರ್ವಹಿಸಲು ಕರ್ನಾಟಕ ರಾಜ್ಯ ನೀರು ಮತ್ತು ನೈರ್ಮಲ್ಯ ಮಿಷನ್ (SWSM) ವತಿಯಿಂದ **ಹೋಬಳಿ (ಕ್ಲಸ್ಟರ್)/ ತಾಲ್ಲೂಕು (ಬ್ಲಾಕ್) ಮಟ್ಟದ ಸಂಯೋಜಕರ** ತಾತ್ಕಾಲಿಕ ಹುದ್ದೆಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಈ ಹುದ್ದೆಗಳನ್ನು ವೈಯಕ್ತಿಕ ಸಮಾಲೋಚನಾ ಆಧಾರದ ಮೇಲೆ, ಒಂದು ವರ್ಷದ ಅವಧಿಗೆ ಮಾತ್ರ ತುಂಬಲು ಉದ್ದೇಶಿಸಲಾಗಿದ್ದು, ಅಗತ್ಯ ಕಂಡುಬಂದಲ್ಲಿ ಸೇವೆಯ ಅವಧಿಯನ್ನು ವಿಸ್ತರಿಸಲಾಗುವುದು..

***ಸಮಾಲೋಚನ ಶುಲ್ಕ:***

| ಹುದ್ದೆಯ ಹೆಸರು | ಮಾಸಿಕ ಶುಲ್ಕ | ಪ್ರಯಾಣ ಹಾಗು ದಿನಭತ್ಯೆ (ದಿನವೊಂದಕ್ಕೆ) | ಷರಾ |
|---|---|---|---|
| ತಾಲ್ಲೂಕು ಮಟ್ಟದ ಸಂಯೋಜಕರು | ರೂ.5000/- | ರೂ.125/- | ತಿಂಗಳಲ್ಲಿ 12 ರಿಂದ 15 ದಿನಗಳ ಗ್ರಾಮ ಭೇಟಿ ನೀಡಬೇಕು |
| ಹೋಬಳಿ ಮಟ್ಟದ ಸಂಯೋಜಕರು | ರೂ.4500/- | ರೂ.100/- | |

**ವಯೋಮಿತಿ:** ಗರಿಷ್ಠ 38 ವರ್ಷಗಳು

**ಕ್ಲಸ್ಟರ್ (ಹೋಬಳಿ)/ ಬ್ಲಾಕ್ (ತಾಲ್ಲೂಕು) ಮಟ್ಟದಲ್ಲಿನ ಸಂಯೋಜಕರು ನಿರ್ವಹಿಸಬೇಕಾಗಿರುವ ಚಟುವಟಿಕೆಗಳು:**

1. ಗ್ರಾಮ ನೀರು ಸರಬರಾಜು ಮತ್ತು ನೈರ್ಮಲ್ಯ ಸಮಿತಿಗಳ ರಚನೆ, ಸಭೆಗಳ ಸಂಘಟನೆ ಮತ್ತು ಮಾರ್ಗದರ್ಶನ
2. ಸಮುದಾಯದಲ್ಲಿ ಅರಿವು ಮತ್ತು ಗ್ರಾಮ ಪಂಚಾಯಿತಿ ಸದಸ್ಯರಿಗೆ ಸಂವಹನ ಪ್ರಕ್ರಿಯೆಗಳಲ್ಲಿ ನೆರವು
3. ಯೋಜನೆಯ ವಿವಿಧ ಭಾಗೀದಾರರಿಗೆ ತರಬೇತಿಗಳ ಸಂಯೋಜನೆ ಮತ್ತು ನಿರ್ವಹಣೆ
4. ನೀರು ಸರಬರಾಜು ಯೋಜನೆಗಳ ವಾರ್ಷಿಕ ಕಾರ್ಯಾಚರಣೆ ಮತ್ತು ನಿರ್ವಹಣೆಯ ಮುಂಗಡ ಪತ್ರ ತಯಾರಿ
5. ಗ್ರಾಮ ನೀರು ಸರಬರಾಜು ಮತ್ತು ನೈರ್ಮಲ್ಯ ವಿಷಯಗಳಲ್ಲಿ ಸಮಿತಿ ಮತ್ತು ಸಮುದಾಯ ಭಾಗವಹಿಸುವಿಕೆಯಲ್ಲಿ ನೆರವು
6. ನೀರು ಸರಬರಾಜು ಯೋಜನೆಗಳ ನಿರಂತರ ಕಾರ್ಯಾಚರಣೆ ಮತ್ತು ನಿರ್ವಹಣೆಗೆ ಸೂಕ್ತ ಕ್ರಿಯಾ ಯೋಜನೆ ಹಾಗೂ ಕಾರ್ಯತಂತ್ರ ರೂಪಿಸುವುದು.
7. ಗ್ರಾಮ ನೀರು ಸರಬರಾಜು ಮತ್ತು ನೈರ್ಮಲ್ಯ ಸಮಿತಿ ಹಾಗೂ ಸಮುದಾಯವು ಯೋಜನಾ ಪ್ರಕ್ರಿಯೆಯಲ್ಲಿ ಸಕ್ರಿಯವಾಗಿ ಭಾಗವಹಿಸುವಂತೆ ಮಾರ್ಗದರ್ಶನ ನೀಡುವುದು.
8. ಕುಡಿಯುವ ನೀರಿನ ಗುಣಮಟ್ಟ ಪರೀಕ್ಷೆ ಮತ್ತು ಪರಿವೀಕ್ಷಣೆಯಲ್ಲಿ ಗ್ರಾಮ ನೀರು ಸರಬರಾಜು ಮತ್ತು ನೈರ್ಮಲ್ಯ ಸಮಿತಿ ಮತ್ತು ಬೇರುಮಟ್ಟದ ಕಾರ್ಯಕರ್ತರೊಂದಿಗೆ ಸಮನ್ವಯ ಸಾಧಿಸುವುದು ಮತ್ತು ಮೇಲುಸ್ತುವಾರಿ ನಡೆಸುವುದು.
9. ನೀರಿನ ಸರಬರಾಜು, ಗುಣಮಟ್ಟ ಮತ್ತು ನೈರ್ಮಲ್ಯ ವಿಷಯಗಳಲ್ಲಿ ಆಶಾ – ಅಂಗನವಾಡಿ ಕಾರ್ಯಕರ್ತರು, ಸ್ವಸಹಾಯ, ಮಹಿಳಾ, ಯುವ ಗುಂಪುಗಳು ನಿಗಾವಹಿಸುವಂತೆ ಸತತ ಸಂಘಟಿಸುವುದು, ಸಂವಾದ ಏರ್ಪಡಿಸುವುದು.
10. ಸುಧಾರಿತ ಸ್ವಚ್ಛತೆ, ನೈರ್ಮಲ್ಯ, ನೀರಿನ ಆರೋಗ್ಯಕರ ಬಳಕೆ ಇವುಗಳ ಬಗ್ಗೆ ವಿದ್ಯಾರ್ಥಿಗಳು, ಉಪಾಧ್ಯಾಯರುಗಳು ನಿಗಾವಹಿಸುವಲ್ಲಿ ಸಹಾಯಕರಾಗಿರುವುದು.
11. ಸಾಮಾಜಿಕ ಸಂಘಟನೆ, ಸಮುದಾಯದ ಭಾಗವಹಿಸುವ ಕುರಿತು ತಪಾಸಣಾ ವರದಿ ತಯಾರಿಕೆ.
12. ನೀರು ಗುಣಮಟ್ಟ ಪರೀಕ್ಷಣಾ ಪ್ರಯೋಗಾಲಯಗಳೊಂದಿಗೆ ವ್ಯವಹರಿಸಿ, ಗುಣಮಟ್ಟದ ಏರು-ಪೇರುಗಳನ್ನು ಗ್ರಾಮ ಪಂಚಾಯತಿ, ಗ್ರಾಮ ನೀರು ಸರಬರಾಜು ಮತ್ತು ನೈರ್ಮಲ್ಯ ಸಮಿತಿ, ಪಂ.ರಾ.ಇಂ.ಇ., ಪ್ರಾಥಮಿಕ ಆರೋಗ್ಯ ಕೇಂದ್ರ ಇವುಗಳೊಂದಿಗೆ ಚರ್ಚಿಸಿ, ಸೂಕ್ತ ಪರಿಹಾರಕ್ರಮಗಳನ್ನು ತೆಗೆದುಕೊಳ್ಳಲು ಮಾರ್ಗದರ್ಶನ ನೀಡುವುದು.

| | |
|---|---|
| ಅರ್ಜಿ ಸಲ್ಲಿಸುವ ವಿಧಾನ | ಆಸಕ್ತ ಪದವೀಧರ ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಯಲ್ಲಿ ಭರ್ತಿ ಮಾಡಿ ದೃಢೀಕೃತ ದಾಖಲೆಗಳೊಂದಿಗೆ ಸಂಬಂಧಿಸಿದ ತಾಲ್ಲೂಕು ಪಂಚಾಯಿತಿ ಕಛೇರಿಗೆ ದಿನಾಂಕ 18/04/2011 ರೊಳಗೆ ಸಲ್ಲಿಸುವುದು. |

**ಅರ್ಜಿ ದೊರೆಯುವ ಸ್ಥಳ:** ತಾಲ್ಲೂಕು ಪಂಚಾಯತಿ ಕಚೇರಿ ಮತ್ತು ವೆಬ್‌ಸೈಟ್: www.jalnirmal.org ದಿಂದ ಪಡೆಯಬಹುದು. ಹೆಚ್ಚಿನ ಮಾಹಿತಿ ಬೇಕಾದಲ್ಲಿ ಮೇಲ್ಕಾಣಿಸಿದ ವೆಬ್‌ಸೈಟ್ ಅಥವಾ ಸಂಬಂಧಿಸಿದ ತಾಲ್ಲೂಕು ಪಂಚಾಯಿತಿಯನ್ನು ಸಂಪರ್ಕಿಸಬಹುದು.

ಸಹಿ/-
ಮಿಷನ್ ನಿರ್ದೇಶಕರು,
ಕ.ರಾ.ನೀ ಮತ್ತು ನೈ.ಮಿಷನ್

232

## ಹೋಬಳಿ (ಕ್ಲಸ್ಟರ್)/ ತಾಲ್ಲೂಕು (ಬ್ಲಾಕ್) ಮಟ್ಟದ ಸಂಯೋಜಕರ ಆಯ್ಕೆ ಪ್ರಕ್ರಿಯೆಯು ಈ ಕೆಳಕಂಡ ಮಾರ್ಗಸೂಚಿಯ ಅನುಸಾರ ನಡೆಯುವುದು

| | |
|---|---|
| ವಿದ್ಯಾರ್ಹತೆ | ಕನಿಷ್ಠ ಅಂಗೀಕೃತ ವಿಶ್ವವಿದ್ಯಾಲಯದಿಂದ ಪದವೀಧರರಾಗಿರಬೇಕು. ಬಿ.ಎಡ್., ವಿಜ್ಞಾನ ಹಾಗು ಸಮೂಹ ಮಾಧ್ಯಮ ಪದವೀಧರರಿಗೆ ಪ್ರಾಶಸ್ತ್ಯ ನೀಡುವುದು. |
| ಅನುಭವ | 1. ಕನಿಷ್ಠ 2 ವರ್ಷಗಳ ಗ್ರಾಮೀಣ ಯೋಜನೆಗಳ ನಿರ್ವಹಣೆ, ಸಮುದಾಯ ಭಾಗವಹಿಸುವಿಕೆ ಪ್ರಕ್ರಿಯೆ.<br>2.ಗ್ರಾಮೀಣ ತರಬೇತಿಗಳ ನಿರ್ವಹಣೆ ಮತ್ತು ಸಂಘಟನೆ, ಸ್ಥಳೀಯ ಸಂಘ-ಸಂಸ್ಥೆಗಳ ಬಲವರ್ಧನೆ.<br>3.ಸಾಮಾಜಿಕ ಚಟುವಟಿಕೆಗಳ ನಿರ್ವಹಣೆ ಮತ್ತು ಸಂಘಟನೆ, ಗ್ರಾಮ ಮಟ್ಟದಲ್ಲಿ ಕ್ಷೇತ್ರ ಚಟುವಟಿಕೆ.<br>4.ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಸಮಿತಿಯ ಆಯ್ಕೆ – ಸಮುದಾಯ ಸಂಘಟನೆ.<br>5.ಪಂಚಾಯತ್ ರಾಜ್ ಇಂಜನಿಯರಿಂಗ್ ಇಲಾಖೆಯಿಂದ ನಿಯೋಜಿತರಾದ ಗ್ರಾಮೀಣ ಕುಡಿಯುವ ನೀರು ಮತ್ತು ನೈರ್ಮಲ್ಯ ಅಧಿಕಾರಿಗಳೊಂದಿಗೆ ಸಮನ್ವಯ.<br>6.ನೀರು ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ಗ್ರಾಮ ಪಂಚಾಯತಿಗಳಿಗೆ ಯೋಜನೆ – ಅನುಷ್ಠಾನ – ಕಾರ್ಯ ಮತ್ತು ನಿರ್ವಹಣೆ – ನೀರಿನ ಗುಣಮಟ್ಟದಲ್ಲಿ ನಿಗಾವಹಿಸುವಿಕೆ, ನೀರಿನ ಗುಣಮಟ್ಟ ಪರೀಕ್ಷೆ.<br>7.ನೀರಿನ ಮಾದರಿಗಳ ಸಂಗ್ರಹ – ಸಾಗಣೆ – ಪ್ರಯೋಗಾಲಯದಲ್ಲಿ ಪರೀಕ್ಷೆ ಹಾಗು ಅವುಗಳ ಫಲಿತಾಂಶವನ್ನು ಗ್ರಾಮ ಸಮುದಾಯಕ್ಕೆ ತಿಳಿಯಪಡಿಸುವಿಕೆ ಮತ್ತು ನೀರು ಪರೀಕ್ಷೆ ಕಿಟ್‌ಗಳ ಬಳಕೆ.<br>8. ಪ್ರಾಥಮಿಕ ಆರೋಗ್ಯ ಪ್ರಾಧಿಕಾರದಿಂದ ಕೊಡಮಾಡುವ ಕ್ಲೋರಿನ್ ಮಾತ್ರೆಗಳ ವಿತರಣೆ, ನೀರು ಮತ್ತು ನೈರ್ಮಲ್ಯ ಸಂಬಂಧೀ ಅವಘಡ/ ಖಾಯಿಲೆಗಳು ಸಂಭವಿಸಿದಾಗ ತಾಲ್ಲೂಕು ಮಟ್ಟದ ಅಭಿಯಂತರರು ಹಾಗು ಆರೋಗ್ಯಾಧಿಕಾರಿಗಳಿಗೆ ವಿಷಯ ರವಾನೆ – ಸೂಕ್ತ ಕ್ರಮ ಕೈಗೊಳ್ಳುವವರೆಗೆ ಸಹಕಾರ.<br>9. ಗ್ರಾಮಮಟ್ಟದಲ್ಲಿ ಗಮನಿಸಿದ ಯಶೋಗಾಥೆ – ವಿಶೇಷ ವಿಚಾರಗಳ ದಾಖಲೀಕರಣ, ತಾಲ್ಲೂಕು ಸಂಪನ್ಮೂಲ ಕೇಂದ್ರಕ್ಕೆ ಸಂಬಂಧಿಸಿದ ಪ್ರತಿ ದಿನದ ಖರ್ಚು-ವೆಚ್ಚಗಳ ದಾಖಲಾತಿ ಮತ್ತು ನಿರ್ವಹಣೆ.<br>10.ನೀರು ಮತ್ತು ನೈರ್ಮಲ್ಯ ಚಟುವಟಿಕೆ, ತರಬೇತಿಗಳಲ್ಲಿ ಭಾಗವಹಿಸಿದ ಅನುಭವ ಮುಂತಾದವುಗಳು. |
| ಅಪೇಕ್ಷಣೀಯ | ಅಭ್ಯರ್ಥಿಯು ಸ್ಥಳೀಯ/ ಅದೇ ತಾಲ್ಲೂಕಿನ ನಿವಾಸಿಯಾಗಿರಬೇಕು. ಯಾವುದೇ ಎರಡು ಅಭ್ಯರ್ಥಿಗಳಿಗೆ ಸಮಾನ ಅಂಕಗಳು ಬಂದಲ್ಲಿ, ವಯಸ್ಸಿನ ಆಧಾರದ ಮೇಲೆ ಆಯ್ಕೆಮಾಡಲಾಗುವುದು |
| ಆಯ್ಕೆಯ ಮಾನದಂಡಗಳು ತಾಲ್ಲೂಕು ಮಟ್ಟದಲ್ಲಿ | 1. **ವಿದ್ಯಾರ್ಹತೆ** — **50 ಅಂಕಗಳು**<br>ಪದವಿ — 20 ಅಂಕಗಳು<br>(ಬಿ.ಎಡ್./ವಿಜ್ಞಾನ/ ಸಮೂಹ ಮಾಧ್ಯಮ) — 10 ಅಂಕಗಳು<br>ಹೆಚ್ಚಿನ ಪದವಿಗಳು — 10 ಅಂಕಗಳು<br>ಸ್ನಾತಕೋತ್ತರ ಪದವಿ — 10 ಅಂಕಗಳು<br>2. **ಕಂಪ್ಯೂಟರಿನ ಜ್ಞಾನ** — **20 ಅಂಕಗಳು (ಗರಿಷ್ಠ)**<br>ಸಾಮಾನ್ಯ ಜ್ಞಾನ — 05 ಅಂಕಗಳು<br>ಕಂಪ್ಯೂಟರ್ ಡಿಪ್ಲೊಮೊ — 10 ಅಂಕಗಳು<br>ಕಂಪ್ಯೂಟರ್ ಪದವಿ — 20 ಅಂಕಗಳು<br>3. **ಅನುಭವ** — **30 ಅಂಕಗಳು (ಗರಿಷ್ಠ)**<br>2 ರಿಂದ 3 ವರ್ಷದೊಳಗೆ — 20 ಅಂಕಗಳು<br>3 ರಿಂದ 5 ವರ್ಷದೊಳಗೆ — 25 ಅಂಕಗಳು<br>5 ವರ್ಷಕ್ಕಿಂತ ಮೇಲ್ಪಟ್ಟು — 30 ಅಂಕಗಳು |
| ಆಯ್ಕೆಯ ಮಾನದಂಡಗಳು ಜಿಲ್ಲಾ ಮಟ್ಟದಲ್ಲಿ | **ಪ್ರತಿ ಹೋಬಳಿಯಿಂದ ಅತಿ ಹೆಚ್ಚು ಅಂಕ ಪಡೆದ ಮೂರು (3) ಅಭ್ಯರ್ಥಿಗಳನ್ನು ಆಯ್ಕೆ ಮಾಡುವುದು. ಆ ಮೂವರು, ಜಿಲ್ಲಾಮಟ್ಟದಲ್ಲಿ ದಿನಾಂಕ 21.04.2011ರಂದು ನಡೆಯುವ ಲಿಖಿತ ಪರೀಕ್ಷೆಗೆ ಅರ್ಹರಾಗಿರುತ್ತಾರೆ.**<br>4. **ಲಿಖಿತ** – ಬಹು ಆಯ್ಕೆ ಮಾದರಿ ಪರೀಕ್ಷೆ — 50 ಅಂಕಗಳು<br>**ಒಟ್ಟು** — 150 ಅಂಕಗಳು |

# ಜಿಲ್ಲಾವಾರು BRC/CRC ಗಳ ವಿವರ

531

| ಕ್ರ ಸಂ. | ಜಿಲ್ಲೆ | 2011-12ನೇ ಸಾಲಿನಲ್ಲಿ ಆಯ್ಕೆಯಾದ BRC/CRC ಗಳ ಸಂಖ್ಯೆ | | |
|---|---|---|---|---|
| | | BRC | CRC | ಒಟ್ಟು |
| 1 | ಬಾಗಲಕೋಟೆ | 6 | 18 | 24 |
| 2 | ಬೆಂಗಳೂರು (ಗ್ರಾ) | 4 | 9 | 13 |
| 3 | ಬೆಂಗಳೂರು (ನ) | 4 | 13 | 17 |
| 4 | ಬೆಳಗಾವಿ | 9 | 30 | 39 |
| 5 | ಬಳ್ಳಾರಿ | 7 | 25 | 32 |
| 6 | ಬೀದರ | 5 | 30 | 35 |
| 7 | ಬಿಜಾಪುರ | 5 | 18 | 23 |
| 8 | ಚಾಮರಾಜನಗರ | 4 | 10 | 14 |
| 9 | ಚಿಕ್ಕಬಳ್ಳಾಪುರ | 6 | 25 | 31 |
| 10 | ಚಿಕ್ಕಮಗಳೂರು | 7 | 34 | 41 |
| 11 | ಚಿತ್ರದುರ್ಗ | 6 | 22 | 28 |
| 12 | ದಕ್ಷಿಣ ಕನ್ನಡ | 5 | 33 | 38 |
| 13 | ದಾವಣಗೆರೆ | 6 | 24 | 30 |
| 14 | ಧಾರವಾಡ | 5 | 14 | 19 |
| 15 | ಗದಗ | 5 | 11 | 16 |
| 16 | ಕಲಬುರಗಿ | 7 | 32 | 39 |
| 17 | ಹಾಸನ | 8 | 37 | 45 |
| 18 | ಹಾವೇರಿ | 7 | 19 | 26 |
| 19 | ಕೊಡಗು | 0 | 4 | 4 |
| 20 | ಕೋಲಾರ | ನೇಮಕಗೊಂಡಿರುವುದಿಲ್ಲ. | | |
| 21 | ಕೊಪ್ಪಳ | ನೇಮಕಗೊಂಡಿರುವುದಿಲ್ಲ. | | |
| 22 | ಮಂಡ್ಯ | 7 | 30 | 37 |
| 23 | ಮೈಸೂರು | 6 | 29 | 35 |
| 24 | ರಾಯಚೂರು | ನೇಮಕಗೊಂಡಿರುವುದಿಲ್ಲ. | | |
| 25 | ರಾಮನಗರ | ನೇಮಕಗೊಂಡಿರುವುದಿಲ್ಲ. | | |
| 26 | ಶಿವಮೊಗ್ಗ | 7 | 32 | 39 |
| 27 | ತುಮಕೂರು | 10 | 50 | 60 |
| 28 | ಉಡುಪಿ | 3 | 9 | 12 |
| 29 | ಉತ್ತರ ಕನ್ನಡ | 10 | 5 | 15 |
| 30 | ಯಾದಗಿರಿ | ನೇಮಕಗೊಂಡಿರುವುದಿಲ್ಲ. | | |
| ಒಟ್ಟು: | | **149** | **563** | **712** |

BRC

220

ಕರ್ನಾಟಕ ಸರ್ಕಾರದ ನಡವಳಿಗಳು

ವಿಷಯ: NRDWP ಕಾರ್ಯಕ್ರಮದ Support Activityಯಡಿ ನೇಮಕಗೊಂಡಿರುವ ತಾಲ್ಲೂಕು / ಹೋಬಳಿ ಮಟ್ಟದ ಸಮನ್ವಯ ಸಿಬ್ಬಂದಿ ಸೇವೆಯನ್ನು ಮುಕ್ತಾಯಗೊಳಿಸುವ ಕುರಿತು.

ಓದಲಾಗಿದೆ:
1. GoI ಮಂಜೂರಾತಿ ಆದೇಶ ಸಂಖ್ಯೆ: W-11020/12/2010/NRDWP/Water/93, ದಿನಾಂಕ:22.02.2011.
2. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 27 ಗ್ರಾನೀಸ(2) 2010, ದಿ:18.3.2011.
3. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 27 ಗ್ರಾನೀಸ(2) 2010, ದಿ:23.05.2011.
4. ಸರ್ಕಾರದ ಆದೇಶ ಸಂಖ್ಯೆ ಗ್ರಾಅಪ 97 ಗ್ರಾನೀಸ(2) 2011, ದಿ:20.10.2011 ಮತ್ತು ದಿನಾಂಕ:23.12.2011.
5. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 97 ಗ್ರಾನೀಸ(2)2012, ದಿ:23.02.2012.

---

ಪೀಠಿಕೆ:

ಮೇಲೆ (3)ರಿಂದ (5)ರಲ್ಲಿ ಓದಲಾದ ಆದೇಶಗಳಲ್ಲಿ ಕೇಂದ್ರ ಪುರಸ್ಕೃತ NRDWP ಕಾರ್ಯಕ್ರಮದ Support Activityಯಡಿ ಸಮಗ್ರವಾಗಿ ಕೈಗೊಳ್ಳಬೇಕಾಗಿದ್ದ ಕುಡಿಯುವ ನೀರಿನ ಗುಣಮಟ್ಟದ ಪರೀಕ್ಷಾ ಆಂದೋಲನ ಹಾಗೂ ಇತರೆ HRD/IEC ಚಟುವಟಿಕೆಗಳ ಸಂಬಂಧ, ರಾಜ್ಯಾದ್ಯಂತ ಜಿಲ್ಲಾವಾರು ಒಂದು ವರ್ಷದ ಅವಧಿಗೆ ನೇಮಕಗೊಂಡು ಮೇ-2011ರಿಂದ ಕರ್ತವ್ಯಕ್ಕೆ ಹಾಜರಾಗಿದ್ದ ತಾಲ್ಲೂಕು / ಹೋಬಳಿ ಮಟ್ಟದ ಸಮನ್ವಯ / ಸಂಯೋಜಕ ಸಿಬ್ಬಂದಿ ವೇತನ ಪಾವತಿಗಾಗಿ ಮಾರ್ಚ್- 2012ರವರೆಗೆ ಅನುದಾನ ಬಿಡುಗಡೆ ಮಾಡಲಾಗಿದೆ. ಸದರಿ ಸಿಬ್ಬಂದಿಗಳ ಸೇವೆಯನ್ನು ಇನ್ನು ಜಿಲ್ಲಾ ಪಂಚಾಯತ್ / ತಾಲ್ಲೂಕು ಪಂಚಾಯತ್ / ಹೋಬಳಿ ಮಟ್ಟದಲ್ಲಿ ಪಡೆಯುತ್ತಿರುವುದರಿಂದ, ಏಪ್ರಿಲ್-2012 ಅಂತ್ಯದವರೆಗಿನ ವೇತನ ಭತ್ಯೆಗಳನ್ನು ಪಾವತಿಸುವ ಅಗತ್ಯತೆಯಿದೆ. ಈಗಾಗಲೇ ರಾಜ್ಯದ ಎಲ್ಲಾ ಗ್ರಾಮ ಪಂಚಾಯತಿಗಳಿಗೆ ಬಹುತೇಕ ಪಂಚಾಯತಿ ಅಭಿವೃದ್ಧಿ ಅಧಿಕಾರಿಗಳು ನೇಮಕಗೊಂಡಿರುವುದರಿಂದ ಮತ್ತು ಜಿಲ್ಲಾ ಮಟ್ಟದಲ್ಲಿ ಭೂ ವಿಜ್ಞಾನಿಗಳ ಸೇವೆ ಲಭ್ಯವಿರುವುದರಿಂದ ಪ್ರಸ್ತುತ ತಾಲ್ಲೂಕು / ಹೋಬಳಿ (BRC/CRC) ಮಟ್ಟದ ಸಮನ್ವಯ ಸಿಬ್ಬಂದಿ ಸೇವೆಯ ಅಗತ್ಯತೆ ಕುರಿತಂತೆ, ಜಿಲ್ಲಾ ಪಂಚಾಯತ್‌ಗಳ ಅಭಿಪ್ರಾಯ ಪಡೆಯಲಾಗಿದೆ. ಬಹುತೇಕ ಜಿಲ್ಲಾ ಪಂಚಾಯತ್‌ಗಳಿಂದ PDOಗಳು ಮತ್ತು ಇತರೆ ಸಿಬ್ಬಂದಿ ಸೇವೆಯನ್ನು ಪಡೆದುಕೊಳ್ಳುವುದು ಹಾಗೂ ಹೊರಗುತ್ತಿಗೆ ಆಧಾರದ ಮೇಲೆ ಸದರಿ BRC/CRCಗಳ ಕೆಲಸಗಳನ್ನು ನಿರ್ವಹಿಸಬಹುದೆಂಬ ಅಭಿಪ್ರಾಯ ಬಂದಿದೆ. ಈ ಕಾರಣದಿಂದ ಮತ್ತು ಭಾರತ ಸರ್ಕಾರದ ಮಾರ್ಗಸೂಚಿಗಳನ್ವಯ ಪ್ರಸ್ತುತ BRC/CRCಗಳನ್ನು ನೇರವಾಗಿ ನೇಮಕ ಮಾಡಿಕೊಳ್ಳದೆ ಅರ್ಹ ಸಂಸ್ಥೆಗಳ ವತಿಯಿಂದ Out Source ಮುಖೇನ ಸದರಿ ಚಟುವಟಿಕೆಗಳನ್ನು ಮುಂದುವರೆಸುವ / ನಡೆಸಿಕೊಳ್ಳುವ ಕುರಿತಂತೆ ನಿರ್ಣಯಿಸಿದೆ. ಅಂತೆಯೇ ಈಗಾಗಲೇ ಕುಡಿಯುವ ನೀರಿನ ಯೋಜನೆಗಳ, ಸಂಪನ್ಮೂಲಗಳು ಹಾಗೂ ನೀರಿನ ಗುಣಮಟ್ಟ ಪರೀಕ್ಷೆ /ಸಮೀಕ್ಷಾ ಚಟುವಟಿಕೆಗಳು ಚಾಲನೆಯಲ್ಲಿರುವುದರಿಂದ ಏಪ್ರಿಲ್-2012ರ ಅಂತ್ಯಕ್ಕೆ ಸದರಿಯವರ ವೇತನ ಪಾವತಿಸಿ ಸದರಿಯವರ ಸೇವೆಯನ್ನು ಮುಕ್ತಾಯಗೊಳಿಸಿ, ಪರ್ಯಾಯ ವ್ಯವಸ್ಥೆ ಮಾಡಬೇಕಾಗಿದೆ. ಆದ್ದರಿಂದ, ಈ ಆದೇಶ.

ಸರ್ಕಾರದ ಆದೇಶ ಸಂಖ್ಯೆ:ಗ್ರಾಅಪ 97 ಗ್ರಾನೀಸ (5) 2011 ಬೆಂಗಳೂರು, ದಿನಾಂಕ:23.04.2012

ಪೀಠಿಕೆಯಲ್ಲಿನ ವಾಸ್ತವಾಂಶಗಳ ಹಿನ್ನೆಲೆಯಲ್ಲಿ, ಈಗಾಗಲೇ NRDWP - Support Activity ಘಟಕದಡಿ ನೇಮಕಗೊಂಡಿರುವ ತಾಲ್ಲೂಕು/ ಹೋಬಳಿ ಮಟ್ಟದ ಸಂಯೋಜಕರು/ ಸಮನ್ವಯ ಸಿಬ್ಬಂದಿ (BRCs/CRCs)ಗಳ ಸೇವೆಯನ್ನು ದಿನಾಂಕ:30.04.2012ಕ್ಕೆ ಮುಕ್ತಾಯಗೊಳಿಸಲು ಆದೇಶಿಸಿದೆ. ಅಂತೆಯೇ ಸದರಿ BRC/CRC ಸಿಬ್ಬಂದಿ ಸೇವೆಯನ್ನು ವಜಾಗೊಳಿಸಲು ಜಿಲ್ಲಾ ಪಂಚಾಯತ್ / ತಾಲ್ಲೂಕು ಪಂಚಾಯತ್‌ಗಳು ಕ್ರಮವಹಿಸತಕ್ಕದ್ದು.

2. ಸದರಿಯವರು ನಿರ್ವಹಿಸುತ್ತಿದ್ದ ಸೇವೆಯನ್ನು ಜಿಲ್ಲಾ / ತಾಲ್ಲೂಕು ಮಟ್ಟದಲ್ಲಿ ಲಭ್ಯವಿರುವ ಪಂಚಾಯತ್ ಅಭಿವೃದ್ಧಿ ಅಧಿಕಾರಿಗಳು / ಕಾರ್ಯದರ್ಶಿಗಳು, ಪಾಟರ್‌ಮನ್ಸ್, ಜಿಲ್ಲಾ ಮಟ್ಟದ ಭೂ ವಿಜ್ಞಾನಿಗಳ ಸಹಯೋಗದಲ್ಲಿ ನಡೆಸುವುದು. ಜೊತೆಗೆ ಅಗತ್ಯವಿದ್ದಲ್ಲಿ ಆಯಾ ಗ್ರಾಮ ಪಂಚಾಯತ್ ಮಟ್ಟದಲ್ಲಿ ಲಭ್ಯವಿರುವ ಆಶಾ ಕಾರ್ಯಕರ್ತೆಯರಿಗೆ ನಿಲುವು ತರಬೇತು(ಓರಿಯಂಟೇಷನ್) ಮಾಡಿಸಿ, ಮಾಸಿಕ ಗೌರವಧನ ತಲಾ ರೂ.500/-ರಂತೆ ಒಂದೊಂದು ಗ್ರಾಮ ಪಂಚಾಯತ್ ವ್ಯಾಪ್ತಿಯಲ್ಲಿ ಇಬ್ಬರನ್ನು ನೇಮಿಸಲು ಜಿಲ್ಲಾ ಪಂಚಾಯತ್ ಮಟ್ಟದಲ್ಲಿ ನಿರ್ಣಯಿಸಬಹುದು. ಪರ್ಯಾಯವಾಗಿ, ಈಗಾಗಲೇ ನೇಮಕಗೊಂಡಿದ್ದು ದಿನಾಂಕ:30.04.2012ರಂದು ವಜಾ ಆಗುವ BRC/CRCಗಳ ಸೇವೆ ಅಗತ್ಯವಿದ್ದಲ್ಲಿ, ಚಾಲ್ತಿ ಪಾರದರ್ಶಕ ನೀತಿಯನ್ವಯ ಅರ್ಹ ಸಂಸ್ಥೆಗಳನ್ನು ಆಯ್ಕೆ ಮಾಡಿ ಸದರಿ ಸಂಸ್ಥೆಗಳ ಮುಖೇನ ಹೊರಗುತ್ತಿಗೆ ಆಧಾರದ ಮೇಲೆ ಖಾಲಿಯಿದ್ದ BRC/CRCಗಳ ಸೇವೆಯನ್ನು ಪಡೆದುಕೊಳ್ಳಲು ಜಿಲ್ಲಾ ಪಂಚಾಯತ್‌ಗಳೇ ನಿರ್ಧರಿಸಬಹುದಾಗಿದೆ. ಆದರೆ, ನೇರವಾಗಿ ಪ್ರಸ್ತುತ BRC/CRCಗಳನ್ನು ಮುಂದುವರೆಸಿ ಮುಂದಿನ ಸೇವಾ ಭದ್ರತೆ, ವೇತನ ಇತ್ಯಾದಿ ವಿಷಯಗಳಿಗೆ ಅಸ್ಪದ ನೀಡಿ ಸೇವೆ ಕ್ರಮಬದ್ಧಗೊಳಿಸುವ ಗೊಂದಲಗಳಿಗೆ ಅವಕಾಶ ಕೊಡಕೂಡದೆಂದು ಸ್ಪಷ್ಟಪಡಿಸಿದೆ.

3. ಏಪ್ರಿಲ್-2012ರಲ್ಲಿ ಸೇವೆ ಸಲ್ಲಿಸಿರುವ ಸದರಿ BRC/CRCಗಳಿಗೆ ಒಂದು ತಿಂಗಳ ವೇತನವನ್ನು ಪಾವತಿಸಿ ಅವರನ್ನು ಸೇವೆಯಿಂದ ಮುಕ್ತಗೊಳಿಸಲು ಅನುಬಂಧ-1ರಲ್ಲಿರುವಂತೆ ರೂ.36.72ಲಕ್ಷ(ಮೂವತ್ತಾರು ಲಕ್ಷದ ಎಪ್ಪತ್ತೆರಡು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

4. **Corporation Bank**, ಮಲ್ಲೇಶ್ವರಂ, ಈ ಆದೇಶದ ಅನುಬಂಧ-1 ರಲ್ಲಿರುವಂತೆ SB ಖಾತೆ ಸಂಖ್ಯೆ: 01038111 ರಿಂದ ಸಂಬಂಧಪಟ್ಟ ಜಿಲ್ಲಾ ಮಟ್ಟದ DWSM, SB ಖಾತೆಗಳಿಗೆ ಕೂಡಲೇ ಅನುದಾನ ವರ್ಗಾಯಿಸಲು ಕ್ರಮ ಕೈಗೊಳ್ಳತಕ್ಕದ್ದು. ಜಿಲ್ಲಾ ಪಂಚಾಯತಿಗಳು ಈ ಅನುದಾನದಿಂದ ತಾಲ್ಲೂಕು/ ಹೋಬಳಿ ಮಟ್ಟದ ಸಂಯೋಜಕರು/ ಸಮನ್ವಯ ಸಿಬ್ಬಂದಿಗಳ ವೇತನ ಪಾವತಿಸಲು ಕ್ರಮ ಕೈಗೊಳ್ಳತಕ್ಕದ್ದು.

5. ಜಿಲ್ಲಾ ಪಂಚಾಯತ್ ಮಟ್ಟದ DWSMಗಳು/ CE/PRED ರವರು ಸದರಿ ಅನುದಾನ ವಿನಿಯೋಗದ ಮಾಹಿತಿಯನ್ನು Support Activity ಘಟಕದ ವೆಚ್ಚವೆಂದು IMISನಲ್ಲಿ ದಾಖಲಿಸತಕ್ಕದ್ದು.

6. ಈ ಆದೇಶವನ್ನು ಗ್ರಾಅಪಂ.ರಾಜ್ ಇಲಾಖೆಯ IFAರವರು ಯೋಜನೆಗಳ ಮುಂದುವರಿಕೆಗೆ ಹೊರಡಿಸಿರುವ ಆದೇಶ ಸಂಖ್ಯೆ:ಗ್ರಾಅಪ/13/ಆಂ.ಆ.ಸ/2012, ದಿ:02.04.2012ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ
ಮತ್ತು ಅವರ ಹೆಸರಿನಲ್ಲಿ,

(ರಾಮಕೃಷ್ಣ)
ಸರ್ಕಾರದ ಅಧೀನ ಕಾರ್ಯದರ್ಶಿ (ಗ್ರಾನೀಸ)
ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಇಲಾಖೆ

ಪ್ರತಿಗಳು:

1. ಮಹಾಲೇಖಪಾಲರು(ಲೆಕ್ಕಪತ್ರ) ಕರ್ನಾಟಕ, ಬೆಂಗಳೂರು.
2. ಮಹಾಲೇಖಪಾಲರು(ಎಯು-1) ಕರ್ನಾಟಕ, ಬೆಂಗಳೂರು.
3. ಮಹಾಲೇಖಪಾಲರು(ಎಯು-2) ಕರ್ನಾಟಕ, ಬೆಂಗಳೂರು.
4. ಉಪ ಮಹಾಲೇಖಪಾಲರು, ಮಹಾಲೇಖಪಾಲರು(ಎಯು-1)ರವರ ಶಾಖಾ ಕಛೇರಿ, ಕಾಲೇಜು ರಸ್ತೆ, ಧಾರವಾಡ.
5. ಮಾನ್ಯ ಗ್ರಾಮೀಣಾಭಿವೃದ್ಧಿ ಮತ್ತು ಪಂ.ರಾಜ್ ಸಚಿವರ ಆಪ್ತ ಕಾರ್ಯದರ್ಶಿಗಳು, ವಿಧಾನಸೌಧ, ಬೆಂಗಳೂರು.
6. ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ ಹಾಗೂ ಅಭಿವೃದ್ಧಿ ಆಯುಕ್ತ ಅವರ ಆಪ್ತ ಕಾರ್ಯದರ್ಶಿ, ವಿಧಾನಸೌಧ, ಬೆಂಗಳೂರು.
7. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಆರ್ಥಿಕ ಇಲಾಖೆ, ವಿಧಾನಸೌಧ, ಬೆಂಗಳೂರು.
8. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಯೋಜನಾ ಇಲಾಖೆ ಇವರ ಆಪ್ತ ಕಾರ್ಯದರ್ಶಿಗಳು, ಬೆಂಗಳೂರು.

